ಗೀತಾ ಸಾಹಿತ್ಯ ಮಾಲೆ—೧೮

# ಭಾರತದ ವೀರ ರಮಣಿಯರು



ನಾಡಿಗ ಕೃಷ್ಣಮೂರ್ತಿ
(ಸಂಪಾದಕರು)

೧೯೫೭

ಗೀತಾ ಸಾಹಿತ್ಯ ಮಂದಿರ
೨೬೨೪, ವಿ. ವಿ. ಮೊಹಲ್ಲ
ಮೈಸೂರು.

# ಮುನ್ನುಡಿ

ಈ ಪುಸ್ತಕವು ನಾಲ್ವರು ವೀರ ರಮಣಿಯರ ಸ್ಫೂರ್ತಿದಾಯಕವಾದ ಜೀವನ ಚಿತ್ರಗಳನ್ನು ವಾಚಕರ ಮುಂದಿಟ್ಟು ಅವರ ಮನಸ್ಸನ್ನು ಕುಣಿಸಿ ತಣಿಸುತ್ತದೆ. ಇದಕ್ಕೆ ಮುನ್ನುಡಿಯನ್ನು ಬರೆಯುವುದು ನನಗೆ ಬಹಳ ಸಂತೋಷಕರವಾಗಿದೆ.

ಈ ಪುಸ್ತಕದಲ್ಲಿ 'ಕಮಲಾ ನೆಹರು', 'ಸರೋಜಿನಿ ನಾಯ್ಡು', 'ಕಸ್ತೂರಿ ಬಾ' ಮತ್ತು 'ವಿಜಯಲಕ್ಷ್ಮಿ ಪಂಡಿತ್—ಎಂಬ ಅಭಿದಾನಗಳಲ್ಲಿ ನಾಲ್ಕು ಜೀವನ ಚಿತ್ರಗಳಿವೆ. ದೇಶಾಭಿಮಾನವೇ ದೇಹಗಳನ್ನು ಧರಿಸಿ ಬಂದಂತಿದ್ದ ಆ ನಾಲ್ಕು "ವೀರ ರಮಣಿ"ಯರ ತ್ಯಾಗಮಯವಾದ ಜೀವನದ ಹಲವು ಸನ್ನಿವೇಶಗಳನ್ನು ಗ್ರಂಥಕರ್ತರು ಹೃದಯಂಗಮವಾಗಿ ವರ್ಣಿಸಿದ್ದಾರೆ. ಗ್ರಂಥಕರ್ತರಾದ ಶ್ರೀಮಾನ್ ನಾಡಿಗ ಕೃಷ್ಣಮೂರ್ತಿಯವರು ಕನ್ನಡಿಗರಿಗೆ ಈ ಮೊದಲೇ ತಮ್ಮ ಗ್ರಂಥಗಳ ಮೂಲಕ ಚಿರಪರಿಚಿತರಾಗಿದ್ದಾರೆ; ಅರಿತನುರಿತ ಲೇಖಕರೆಂದು ಖ್ಯಾತಿಯನ್ನು ಗಳಿಸಿದ್ದಾರೆ. "ಭಾರತದ ವೀರ ರಮಣಿಯರು" ಎಂಬ ಈ ಪುಸ್ತಕವನ್ನೂ ಅವರು ಮನ ಮುಟ್ಟುವಂತೆ ಸರಳವಾದ ತಿಳಿಗನ್ನಡ ಶೈಲಿಯಲ್ಲಿ ಬಹಳ ಸ್ವಾರಸ್ಯವಾಗಿ ಬರೆದಿದ್ದಾರೆ. ಪುಸ್ತಕವನ್ನು ಒಮ್ಮೆ ಓದಲು ಪ್ರಾರಂಭಿಸಿದರೆ ಅದನ್ನು ಪೂರೈಸುವವರೆಗೂ ಕೆಳಗಿಡಲು ಮನಸ್ಸೇ ಬರುವುದಿಲ್ಲ; 'ನನಗೆ ಬಾ ದರ್ಶನ' ಎಂಬ ಭಾಗವನ್ನಂತೂ ಒಂದು ಸಾರಿ ಓದಿದರೆ ತೃಪ್ತಿಯೇ ಆಗುವುದಿಲ್ಲ. ಈ ಗ್ರಂಥವನ್ನು ಬರೆದು ಶ್ರೀಮಾನ್ ನಾಡಿಗ ಕೃಷ್ಣಮೂರ್ತಿಯವರು ಕನ್ನಡಿಗರಿಗೆ ದೊಡ್ಡ ಉಪಕಾರವನ್ನು ಮಾಡಿದ್ದಾರೆ. ವಿಜಯಲಕ್ಷ್ಮಿ ಪಂಡಿತರ ಜೀವನ ಚರಿತ್ರೆಯನ್ನು ಸರಳವಾದ ಶೈಲಿ ಶ್ರೀಮತಿ ಶಕುಂತಲಾ ನಾಡಿಗ್‌ರವರು ಹೃದಯಂಗಮಯವಾಗಿ ಚಿತ್ರಿಸಿದ್ದಾರೆ. ಈ ಪುಸ್ತಕಕ್ಕೆ ಇದೂ ಒಂದು ಅನರ್ಘ್ಯ ರತ್ನವನ್ನು ಸೇರಿಸಿ, ಪುಸ್ತಕದ ಬೆಲೆಯನ್ನು ಹೆಚ್ಚಿಸಿದೆ. ಇವರಿಬ್ಬರ ಸಾಹಿತ್ಯ ಸೇವೆಯು ಚಿರಕಾಲ ನಡೆದು ಕನ್ನಡಿಗರಿಗೆ ಸಹಾಯವಾಗುವಂತೆ ಭಗವಂತನು ಅನುಗ್ರಹಿಸಲೆಂದು ನಾನು ಮನಃಪೂರ್ವಕವಾಗಿ ಹಾರೈಸುತ್ತೇನೆ.

**ಸಿ. ಕೆ. ವೆಂಕಟರಾಮಯ್ಯ.**

# ವಿಷಯ ಸೂಚಿಕೆ





# ಕಮಲಾ ನೆಹರು

## ಯಾರೀಕೆ?

ಆನಂದ ಭವನದ ವಿಶಾಲವಾದ ಕೋಣೆಯೊಂದರಲ್ಲಿ ಆಕೆ ಮಂಚದ ಮೇಲೆ ಮಲಗಿದ್ದಾಳೆ. ಅಸಹಕಾರ ಚಳುವಳಿ, ಕರನಿರಾಕರಣ ಸತ್ಯಾಗ್ರಹ, ಬಿಹಾರ ಭೂಕಂಪದ ಪರಿಹಾರದ ಕೆಲಸ—ಇವುಗಳ ಪರಿಣಾಮವಾಗಿ ಮೊದಲೇ ಕೃಶವಾಗಿದ್ದ ದೇಹ ಈಗ ತೀರಾ ಕೆಟ್ಟುಹೋಗಿದೆ. ಮಗಳಂತೆ ಪ್ರೀತಿಸುತ್ತಿದ್ದ ಮಾವನವರು ತೀರಿಕೊಂಡ ದುಃಖವೊಂದುಕಡೆ. ಸತತವೂ ಸೆರೆಮನೆಯೇ ಆವಾಸವಾಗಿ, ಗಂಡ ಅತಿ ಅವಶ್ಯಕವಾಗಿ ಹತ್ತಿರದಲ್ಲಿರಬೇಕಾದಾಗ, ಆತ ಇರಲು ಸಾಧ್ಯವಿಲ್ಲದುದರ ನೋವು ಒಂದುಕಡೆ. ಇದೆಲ್ಲಕ್ಕಿಂತ ಮೇಲಾಗಿ, ದೇಶದ ಸೇವೆಯಲ್ಲಿ ತನ್ನ ಪಾತ್ರವಹಿಸಲು ಅಸಹಾಯಳಾಗಿ, ರೋಗದಿಂದ ನರಳುತ್ತಿದ್ದು, ದೇಶದ ಸ್ವಾತಂತ್ರ್ಯಕ್ಕಾಗಿ ಕೊರಗುತ್ತಿದ್ದ ಹಂಬಲ.

ಸರ್ಕಾರ ಸೆರೆಮನೆಯಲ್ಲಿದ್ದ ಗಂಡನಿಗೆ ಖಾಯಿಲೆಯಿಂದ ಮಲಗಿದ್ದ ಆತನ ಹೆಂಡತಿಯನ್ನು ಸಂದರ್ಶಿಸಲು ಅಪ್ಪಣೆ ಕೊಟ್ಟಿದೆ. ಆತ ನೈನಿ ಸೆರೆಮನೆಯಿಂದ ಧಾವಿಸಿ, ತನ್ನ ಹೆಂಡತಿಯ ಪಕ್ಕದಲ್ಲಿ ಕುಳಿತು ಸಂತೈಸುತ್ತಿದ್ದಾಗ ಕ್ಷಣಕಾಲ ಮೌನ. ಇಬ್ಬರೂ ಧೈರ್ಯದಿಂದ ಮುಗುಳುನಗೆ ನಗುತ್ತಾರೆ. ಇಬ್ಬರಿಗೂ ಸಿಂಹ ಬಲ ಬಂದಂತೆ ಭಾಸವಾಗುತ್ತದೆ. ಗಂಡ ಹೆಂಡಿರ ಹೃದಯ ಒಂದಾಗುತ್ತದೆ; ಗಂಡನಿಗಿಂತ ಹೆಚ್ಚಾಗಿ ಹೆಂಡತಿ,

ಆಕೆಗಿಂತ ಹೆಚ್ಚಾಗಿ ಗಂಡ ಒಬ್ಬರನ್ನೊಬ್ಬರು ಅರಿತುಕೊಳ್ಳುತ್ತಾರೆ. ಆನಂದಭವನವೆಲ್ಲ ಆನಂದದಿಂದ ತುಳುಕಾಡುತ್ತದೆ. ಹೆಂಡತಿಯನ್ನು ನೋಡಲು ಮೀಸಲಾಗಿ ಕೊಟ್ಟಿದ್ದ ಕಾಲ ಸವೆಯುತ್ತ ಬರುತ್ತದೆ. ಸರಿ ಇನ್ನು ಹೊರಡಬೇಕು ನೈನಿ ಸೆರೆಮನೆಗೆ. ಆ ಅಗಲಿಕೆ ಅನುಭವಿಸಿದವರಿಗೇ ಗೊತ್ತು. ಎಂತಹ ಹೃದಯವಿದ್ರಾವಕವಾದ ದೃಶ್ಯವದು. ಆದರೂ ಅಲ್ಲಿ ಒಂದು ಆತ್ಮೀಯತೆ, ಗಾಂಭೀರ್ಯ, ಮಮತೆ, ಇದೆ. ಜೊತೆಗೆ ಅಗಲಿಕೆಯ ನೋವೂ ಇದೆ. ಮತ್ತೊಂದುಸಲ ಗಂಡ ಹೆಂಡತಿಯನ್ನು ಮನಸಾರೆ ನೋಡುತ್ತಾರೆ. ಹೆಂಡತಿ ಮುಗುಳುನಗೆ ನಗುತ್ತಾಳೆ. ಆ ನಗೆಯಲ್ಲಿ ಗಂಡನಿಗೆ ಧೈರ್ಯ—ಹುಮ್ಮಸ್ಸು ಕೊಡುವ, ನೊಂದ ಮನಸ್ಸನ್ನು ಸಂತೈಸುವ, ಶಕ್ತಿಯಿದೆ. ಆಕೆಗೆ ತುಂಬಾ ಜ್ವರಬಂದು ಮಾತನಾಡಲು ಶಕ್ತಿಯಿಲ್ಲದಿದ್ದರೂ ಗಂಡನ ಬರುವಿನಿಂದ ಅಗಾಧ ಬಲ ಪಡೆದಿದ್ದಾಳೆ. ಆತ ಇನ್ನೇನು ಆಕೆಯ ಕೊಠಡಿಯಿಂದ ಹೊರಡಬೇಕು—ಅಷ್ಟರಲ್ಲಿ ಕೈಸನ್ನೆ ಮಾಡಿ ಆತನನ್ನು ಕರೆದು ನಗುತ್ತಾ ಧೈರ್ಯದಿಂದ ಕಿವಿಮಾತು ಹೇಳುತ್ತಾಳೆ.

" ಸರ್ಕಾರಕ್ಕೆ ಕ್ಷಮಾಪಣೆ ಕೊಡುತ್ತೀರಂತೆ ಹೌದೇನು ? ಹಾಗೆ ಮಾಡಬೇಡಿ ! " ಎಂದು.

ಯಾರೀಕೆ ?

## ಬಾಲ್ಯ ಜೀವನ

ಜೈಪುರದ ಆಚಾರಶೀಲ ಮನೆತನದ ಕಾಶ್ಮೀರಿ ಬ್ರಾಹ್ಮಣವಂಶಕ್ಕೆ ಸೇರಿದವರು ಶ್ರೀ ಜೈಕಿಶ್ ಅತಲ್‌ರವರು. ವಾಪಾರೋದ್ಯಮದಲ್ಲಿ ಚತುರರು. ದೆಹಲಿಯಲ್ಲಿ ತಮ್ಮ ವ್ಯಾಪಾರವನ್ನು ಪ್ರಾರಂಭಮಾಡಿದರು. ಕೆಲವು ದಿನಗಳಲ್ಲಿಯೇ ದೆಹಲಿಯ ವ್ಯಾಪಾರೀವರ್ಗದಲ್ಲಿ ಶ್ರೀ ಜೈಕಿಶನ್‌ರ ಹೆಸರು

ಪ್ರಭಾವ ಬೀರಿತ್ತು. ದೆಹಲಿಯ ವ್ಯಾಪಾರಸ್ಥರು, ಜೈಕಿಸನ್‌ರಿಗೆ ಶ್ರೇಷ್ಠ ಪದವಿಯನ್ನು ಕೊಟ್ಟು ಹಿರಿಯರಂತೆ ಅವರನ್ನು ಸನ್ಮಾನಿಸುತ್ತಿದ್ದರು. ಸಣ್ಣ ಸಣ್ಣ ವ್ಯಾಪಾರಿಗಳು ತಮ್ಮ ಕುಂದುಕೊರತೆಗಳನ್ನು ಹೇಳಿಕೊಳ್ಳುವುದು, ಸಹಾಯಪಡೆಯುವುದು ಮುಂತಾದ ಕೆಲಸಗಳನ್ನು ಶ್ರೀ ಜೈಕಿಶನ್ ರವರಿಂದ ಮಾಡಿಸಿಕೊಳ್ಳುತ್ತಿದ್ದರು. ಜೈಕಿಶನ್ನರ ಅಂಗಡಿಯಲ್ಲಿ 'ಇಂಥ ಸಾಮಾನು ಸಿಕ್ಕಲಿಲ್ಲ' ಎಂಬ ಮಾತು ಬರುತ್ತಿರಲಿಲ್ಲ. ಅವರಲ್ಲಿ ಮನುಷ್ಯ ಜೀವಿಗೆ ಸಾಮಾನ್ಯವಾಗಿ ಬೇಕಾಗುವ ಎಲ್ಲಾ ಸಾಮಾನುಗಳು ಸಿಕ್ಕುತ್ತಿದ್ದವು. ಜೈಕಿಶನ್ನರು ತುಂಬಾ ಉದಾರಿಗಳು, ಹಾಗೂ ಕರುಣಾಶಾಲಿಗಳು. ಇವರು ಜವಹರ್‌ಲಾಲ್ ಕೌಲರ್ ಎಂಬುವರನ್ನು ದತ್ತು ತೆಗೆದುಕೊಂಡರು.

೧೯೦೦ ರಲ್ಲಿ ಜವಹರಲಾಲ್ ಕೌಲರರಿಗೆ ಒಬ್ಬಳೇ ಮಗಳು ಜನ್ಮವೆತ್ತಿದರು. ಆಕೆಯೇ ಕಮಲ. ಕೆಲವು ದಿನಗಳ ಮೇಲೆ ಕೈಲಾಸನಾಥ ನೆಂಬ ಒಬ್ಬ ಮಗ ಜನಿಸಿದರು.

ಆಗಿನ ಕಾಲದಲ್ಲಿ ಸ್ತ್ರೀ ವಿದ್ಯಾಭ್ಯಾಸ ಅಷ್ಟು ಮುಂದುವರಿದಿರಲಿಲ್ಲ. ಅದರಲ್ಲೂ ದೆಹಲಿ ಪ್ರಾಂತ್ಯದಲ್ಲಿ ಮೊಗಲ್‌ಸಾಮ್ರಾಟರ ಕಂದಾಚಾರ ಪದ್ಧತಿ ಅಳಿಸಿರಲಿಲ್ಲ. ಸ್ತ್ರೀಯರು ಹೊರಗೆ ಓಡಾಡುವುದೇ ಗಾಂಭೀರ್ಯಕ್ಕೆ ಕುಂದಾಗಿತ್ತು. ಹಾಗೆ ಬಂದರೂ ಬುರುಕಿ ಹಾಕಿಕೊಂಡು ಬರುತ್ತಿದ್ದರು. ಕುಟುಂಬದಲ್ಲಿ ಮಾತ್ರ ಸ್ವಾತಂತ್ರ್ಯವಿತ್ತು. ಈ ಹಿನ್ನೆಲೆಯಲ್ಲಿ ಕಮಲ ಬೆಳೆದರು. ಆಕೆಯ ಶಿಕ್ಷಣ ಮನೆಯಲ್ಲಿಯೇ ಆಗಬೇಕಾಯಿತು. ಸ್ತ್ರೀಯರಿಗೆ ಹೆಚ್ಚಾಗಿ ಅರಬ್ಬೀ ಮತ್ತು ಪಾರ್ಸಿ ಭಾಷೆ ಹೇಳಿಕೊಡಲಾಗುತ್ತಿತ್ತು. ಕಮಲ ಇವುಗಳ ಜೊತೆಗೆ ಹಿಂದಿಯನ್ನೂ ಕಲಿತರು.

ಕಮಲರವರಿಗೆ ಏಳುವರ್ಷ ತುಂಬಿದಾಗ, ಹತ್ತಿರದ ಸಂಬಂಧಿಯೊಡಗೂಡಿ ಪ್ರಯಾಗಕ್ಕೆ ಪ್ರಯಾಣ ಬೆಳೆಸಿದರು. ಅಲಹಾಬಾದಿನ ಸುಪ್ರಸಿದ್ಧ ಪತ್ರಿಕೆ, "ಲೀಡರ್" ಸಂಪಾದಕರಾದ ಶ್ರೀ ಚಿಂತಾಮಣಿಯವರಿದ್ದ ಬಂಗಲೆಯಲ್ಲಿ ಅವರು ವಾಸಿಸುತ್ತಿದ್ದರು. ಪ್ರಯಾಗದಲ್ಲಿಯೂ ಕೂಡ ಶಿಕ್ಷಣ ಮನೆಯಲ್ಲಿಯೇ ಆಯಿತು.

ಜೈಕಿಶನ್ನರು ಸುಪ್ರಸಿದ್ಧ ವ್ಯಾಪಾರಿಗಳು, ಆಗರ್ಭ ಶ್ರೀಮಂತರು. ಶ್ರೀ ಮೋತಿಲಾಲರು ಶ್ರೇಷ್ಠ ತರಗತಿಯ ನ್ಯಾಯವಾದಿಗಳು. ಅವರ ಸಿರಿ ತನಕ್ಕೂ ಕಡಿಮೆಯಿರಲಿಲ್ಲ. ಜೈಕಿಶನ್ನರು, ಕೌಲರು, ಮೋತಿಲಾಲರ ಗೆಳೆಯ ರಾದರು. ಗೆಳೆತನ ಅವರನ್ನು ಹತ್ತಿರಕ್ಕೆ ತಂದಿತು. ಅವರ ಗೆಳೆತನ ಬೆಳೆ ಯಿತು. ಅವರಂತೆಯೇ ಕಮಲ, ಜವಹರರ ಗೆಳೆತನವೂ ಬೆಳೆಯಿತು. ಪ್ರಯಾಗದಲ್ಲಿ ಕಮಲರವರ ಮನೆಗೆ ಜವಹರರು ಆಗಾಗ ಬಂದು ಹೋಗು ತ್ತಿದ್ದರು. ಜೈಕಿಶನ್ನರು, ಕೌಲರು, ಹಾಗೂ ಮೋತಿಲಾಲರು, ತಮ್ಮ ಗೆಳೆತನವೇಕೆ ಬಾಂಧವ್ಯದಲ್ಲಿ ಒಂದುಗೂಡಬಾರದೆಂದು ಯೋಚಿಸುತ್ತಿದ್ದರು.

ಬೇಸಿಗೆಯಲ್ಲಿ ವಿಶ್ರಾಂತಿಗಾಗಿ ಜೈಕಿಶನ್ನರು ತಮ್ಮ ಪರಿವಾರದೊಂದಿಗೆ ಮುಸ್ಸೂರಿ ತೋಟಗಳ, ತಂಪಾದ ನೆರಳಿನಲ್ಲಿ ಕಾಲಕಳೆಯಲು ಹೊರಟರು. ಕಮಲ ಜೊತೆಗಿದ್ದರು. ಇತ್ತ ಮೋತಿಲಾಲರು ಜವಹರರೊಂದಿಗೆ ಅಲ್ಲಿಗೆ ಬಂದಿದ್ದರು. ಅಲ್ಲೀ ಜವಹರರು ಕಮಲರನ್ನು ಚೆನ್ನಾಗಿ ತಿಳಿಯಲು ಅವ ಕಾಶ ಸಿಕ್ಕಿದ್ದು; ಹೃದಯಗಳು ಮಿಲನವಾದುವು. ಜೈಕಿಶನ್ನರ ಮತ್ತು ಮೋತೀಲಾಲರ ಸಮಸ್ಯೆ ಬಗೆಹರಿಯಿತು. ಮದುವೆ ನಿಶ್ಚಯವಾಯಿತು.

## ವಿವಾಹ

ಕಮಲ—ಜವಹರರ ಪರಿಚಯವಾದ ಎರಡು ವರ್ಷಗಳನಂತರ ಅವರ ಮದುವೆ ವಿಜೃಂಭಣೆಯಿಂದ ನೆರವೇರಿತು. ಮೊದಲನೆಯ ಮಹಾ ಯುದ್ಧ ಪ್ರಾರಂಭವಾಗಿ ಎರಡು ವರ್ಷಗಳಾಗಿತ್ತು. ಮೋತಿಲಾಲರ ಒಬ್ಬರೇ ಮಗ, ಜವಹರಲಾಲರ ಮದುವೆಯ ಸಮಾರಂಭವು ವಿಶೇಷ ಸಂಭ್ರಮದಿಂದ ನಡೆಯುವುದಿತ್ತು. ಮದುವೆಗಾಗಿ ಸಿದ್ಧತೆಗಳು ತಿಂಗಳು ಗಟ್ಟಲೆ ನಡೆದವು. ಆನಂದಭವನದ ತುಂಬಾ ಪ್ರತಿದಿನವೂ ಚಿನಿವಾಲರು ವರ್ತಕರು, ಬಟ್ಟೆ ಹೊಲಿಯುವವರು, ಬಂದು ಹೋಗುತ್ತಿದ್ದರು.

ನೂರಾರು ಗುಮಾಸ್ತರು ಮದುವೆಯ ನಾನಾ ಸಿದ್ಧತೆಗಳಲ್ಲಿ ಮಗ್ನರಾಗಿ ಗಜಿಬಿಜಿಯಿಂದ ಓಡಾಡುತ್ತಿದ್ದರು. ವಸಂತ ಪಂಚಮಿಯ ದಿನ, ಕಮಲ ಜವಹರರನ್ನು ಮದುವೆಯಾದರು.

ಹೆಣ್ಣಿನ ಮನೆಯಲ್ಲಿ ಮದುವೆ ಆಗಬೇಕು. ಕಮಲರವರ ತವರು ಮನೆ ದೆಹಲಿ. ಆದ್ದರಿಂದ ಮದುವೆ ಅಲ್ಲಿಯೇ ಆಗಬೇಕಾಗಿತ್ತು. ಮದುವೆಯ ದಿನಕ್ಕೆ, ಒಂದು ವಾರಕ್ಕೆ ಮುಂಚಿತವಾಗಿಯೇ ಅಲಹಾಬಾದಿನಿಂದ ಬೀಗರು ಶುಭಮುಹೂರ್ತದಲ್ಲಿ ಹೊರಟು ದೆಹಲಿಗೆ ಬಂದರು. ಮೋತೀಲಾಲರ ಸಂಗಡ ನೂರಾರು ಅಥಿತಿಗಳನ್ನು ಕರೆದುಕೊಂಡು ಬಂದಿದ್ದರು. ಮದುವೆಯ ಮಂಡಲಿಗಾಗಿ, ಅಲಂಕೃತವಾದ ಒಂದು ವಿಶೇಷ ರೈಲು ಗಾಡಿಯೇ ಏರ್ಪಾಡಾಗಿತ್ತು. ಇನ್ನೂ ನೂರಾರು ಅಥಿತಿಗಳು ಭಾರತದ ನಾನಾ ಮೂಲೆಗಳಿಂದ ಬಂದು ದೆಹಲಿಯಲ್ಲಿ ಸೇರಿದರು. ಅತಿಥಿಗಳ ಬಿಡಾರಕ್ಕೆ ಮನೆಗಳು ಸಾಲದೆ ಬಿದ್ದುದರಿಂದ ನೂರಾರು "ಗುಡಾರ" (ಡೇರೆ)ಗಳನ್ನು ಕಟ್ಟಬೇಕಾಯಿತು. ಒಂದುವಾರದಲ್ಲಿ ದೆಹಲಿಯಲ್ಲಿ ಒಂದು ಚಿಕ್ಕ ವಸಾಹತೇ ನಿರ್ಮಾಣವಾಯಿತು. ಅದಕ್ಕೆ "ನೆಹರು ಮದುವೆಯ ಬಿಡಾರ" ಎಂಮ ಹೆಸರಿಡಲಾಯಿತು.

ಮದುವೆ ೧೦ ದಿನಗಳ ವರೆಗೆ ಬಹಳ ವಿಜೃಂಭಣೆಯಿಂದ ನಡೆಯಿತು. ಅನಂತರ ಸೌಂದರ್ಯವತಿಯಾದ ಸೌಭಾಗ್ಯವತಿಯನ್ನು ಕರೆದುಕೊಂಡು ಜವಹರಲಾಲರು ಅಲಹಾಬಾದಿಗೆ ತೆರಳಿದರು. ೨೧ ತಿಂಗಳ ನಂತರ ೧೯೧೭ರಲ್ಲಿ ಅವರಿಬ್ಬರ ಪ್ರೀತಿಯ ಕುಸುಮ ಇಂದಿರಾ ಪ್ರಿಯದರ್ಶಿನಿ ಹುಟ್ಟಿದಳು. ಆನಂದಭವನದಲ್ಲಿ ಸಂತೋಷಸಾಗರದ ಕೋಡಿ ಹರಿಯಿತು. ಮನೆಗೆ ಬಂದ ಅತಿಥಿಗಳಿಗೆ ಸುಂದರಳಾದ ಕಮಲಳ ಕಡೆ ಹೆಮ್ಮೆಯಿಂದ ಕೈತೋರಿಸಿ 'ಇವಳೇ ನಮ್ಮ ಸೊಸೆ' ಎಂದು ತೋರಿಸುತ್ತಿದ್ದ ಮೋತೀಲಾಲರ ಆನಂದಕ್ಕೆ ಪಾರವೇ ಇಲ್ಲವಾಯಿತು.

ಜವಹರ—ಕಮಲರ ದಾಂಪತ್ಯ ಜೀವನ ಮೊದಲಿನಲ್ಲಿ ಸುಖಮಯವಾಗಿ ಪ್ರಾರಂಭವಾಯಿತು. ವಿನಯವತಿಯಾಗಿ, ಕಮಲ ಎಲ್ಲರಿಂದಲೂ

'ಬೇಕೆ'ನ್ನಿಸಿಕೊಂಡು ಮನೆಗೆಲಸನ ನಿರ್ವಹಣೆಯಲ್ಲಿ ನೈಪುಣ್ಯತೆಯನ್ನು ಪಡೆದಳು. ನವೀನ ರೀತಿಯ ವಿದ್ಯಾಭ್ಯಾಸ ಆಕೆಗಾಗಿರಲಿಲ್ಲ. ಹಾಗೆಂದು ಜ್ಞಾನಸಂಪಾದನೆಯಲ್ಲಿ ಎಂದೂ ಹಿಂದೆ ಬೀಳುತ್ತಿರಲಿಲ್ಲ. ಕಣ್ಣಿಗೆ ಕಂಡು ಕಿವಿಗೆ ಕೇಳಿಸಿದ ಅನೇಕ ವಿಷಯಗಳನ್ನು ತಿಳಿದುಕೊಳ್ಳುವುದರಲ್ಲಿ ಆಸಕ್ತಿ ತೋರಿಸುತ್ತಿದ್ದರು. ಮನೆಯ ಮುದ್ದು ಮಗಳಾದರೂ ಆಕೆಗೆ ಜಂಭ ಸ್ವಲ್ಪವೂ ಇರಲಿಲ್ಲ. ಅದಕ್ಕೆ ಬದಲಾಗಿ ಯಾವಾಗಲೂ ಆನಂದದಿಂದ ಮೃದುತೆಯಿಂದ ನಡೆದುಕೊಳ್ಳುತ್ತಿದ್ದರು.

ಮದುವೆಯ ಕಾಲಕ್ಕೆ ಕಮಲ ತುಂಬಾ ನಾಚಿಕೆಯ ಸ್ವಭಾವದವಳಾಗಿ ಯಾರ ಹತ್ತಿರದಲ್ಲೂ ಸೇರುತ್ತಿರಲಿಲ್ಲ. ಈಗಿನ ಕಾಲದ ಹುಡುಗಿಯರಲ್ಲಿ ಬಹು ಮಂದಿಗೆ ಇರುವ ಚಂಚಲ ಮನೋವೃತ್ತಿ ಆಕೆಯಲ್ಲಿಲ್ಲದಿದ್ದುದು ಒಂದು ದೊಡ್ಡ ಗುಣ. ಆಗಲೇ ಆಕೆ ತನ್ನ ಮನಸ್ಸಿನ ಸ್ಥಿರತೆಯನ್ನು ಅಳೆದುಕೊಂಡಿದ್ದರು. ಆಕೆ ಯಾವಾಗಲೂ ಹುಡುಗಿಯಂತೆ ಕಾಣುತ್ತಿದ್ದರೂ ಸ್ವಲ್ಪ ದೊಡ್ಡವಳಾಗಿ ಬೆಳೆದಾಗ, ಆಕೆಯ ಕಣ್ಣುಗಳಲ್ಲಿ ಉಜ್ವಲ ಕಾಂತಿ ಎದ್ದು ಕಾಣುತ್ತಿತ್ತು. ಆಚಾರಶೀಲ ವಾತಾವರಣದಲ್ಲಿ ಬೆಳೆದುಬಂದವ ಳಾದರೂ ಬಲುಬೇಗ ಆಧುನಿಕ ಮಾರ್ಗದಲ್ಲಿ ಹೊಂದಿಕೊಂಡರು. ತಾನು ಭಾರತದ ಹೆಣ್ಣು ಎಂಬ ಹೆಮ್ಮೆ ಕೊನೆಯ ವರೆಗೂ ಅವರ ಹೃದಯದಲ್ಲಿ ಸ್ಥಿರವಾಗಿ ನಿಂತಿತ್ತು.

ಕಮಲಳ ಬುದ್ಧಿಶಕ್ತಿ, ಚಾತುರ್ಯ, ನಮ್ರತೆ ನೋಡಿ ಮೋತೀಲಾಲ ರಿಗೆ ಬಲು ಹರ್ಷ. ಕಮಲರನ್ನು ಮುದ್ದು ಮಗಳಂತೆ ಕಾಪಾಡಿದರು. ತಮ್ಮ ಮಕ್ಕಳು ವಿಜಯಲಕ್ಷ್ಮಿ, ಕೃಷ್ಣಾ ಇವರಂತೆ ಕಮಲಾ ಮೂರನೆಯ ಮಗಳಾದರು. ನಾದಿನಿಯರಾದರೂ ಅಷ್ಟೆ. ಇನ್ನೊಬ್ಬ ಸಹೋದರಿ ಬಂದಳೆಂಬ ಆನಂದದಿಂದ ಆಕೆಗೆ ಸ್ವಾಗತವಿತ್ತ ಸಮಾರಂಭ ಅವರ ಪ್ರೀತಿ ಯನ್ನು ತೋರಿಸುತ್ತಿತ್ತು. ಅತ್ತೆಮಾವಂದಿರ ಸೇವೆ ಕಮಲರ ಸೊತ್ತಾಗಿತ್ತು. ಮುಪ್ಪಿನ ಮಾವನವರು, ಯಾವಾಗಲೂ ಖಾಹಿಲೆಯಲ್ಲಿದ್ದ ಅಕ್ಕರೆಯ ಅತ್ತೆಯವರು, ಕಮಲಳ ಕೋಮಲ ಸ್ವಭಾವ, ಸೂಕ್ಷ್ಮಬುದ್ಧಿ, ಪ್ರಾಮಾಣಿಕ ತನದ ಸೇವೆ ನೋಡಿ ಮೆಚ್ಚಿದರು. ಅಷ್ಟೇ ಅಲ್ಲ, ಜವಹರರು ಅವರ ಮಾತಾಪಿತೃಗಳ ಒಂದು ಕಣ್ಣಾಗಿದ್ದರೆ ಕಮಲ ಇನ್ನೊಂದು ಕಣ್ಣಾಗಿದ್ದರು.

ಅತ್ತೆಮಾವಂದಿರಿಗೆ ಮುದ್ದಿನ ಸೊಸೆಯಾಗಿ, ಜವಹರರಿಗೆ ಪ್ರೀತಿಯ ಹೆಂಡತಿಯಾಗಿ, ನಾದಿನಿಯರಿಗೆ ಅಕ್ಕರೆಯ ಅತ್ತಿಗೆಯಾಗಿ, ಇಂದಿರೆಗೆ ಮಮತೆಯ ತಾಯಾಗಿ ಕಮಲಾ ತಮ್ಮ ದಾಂಪತ್ಯಜೀವನದ ರಥವನ್ನು ಸಾಗಿಸಿದ್ದರು.

## ಸರಳ ಸ್ವಭಾವ

ಕಮಲ ಮಗುವಿನಂತೆ ಸರಳ ಸ್ವಭಾವಿ. ಆತ್ಮಗೌರವದ ಅಭಿಮಾನವುಳ್ಳ ಸೂಕ್ಷ್ಮಗ್ರಾಹಿ. ಆಕೆಗೆ ಭಾರತದ ಸ್ವಾತಂತ್ರ್ಯ ಎಲ್ಲಕ್ಕಿಂತ ಮಿಗಿಲು. ಅದಕ್ಕಾಗಿ ಆಕೆ ತೋರಿಸಿದ ಧೈರ್ಯ, ಇಟ್ಟುಕೊಂಡಿದ್ದ ನಂಬುಗೆ ಅಸದಳವಾದದ್ದು. ಕಮಲಾನೆಹರುರವರನ್ನು ಅರಿತುಕೊಳ್ಳುವುದು ಬಹಳ ಕಷ್ಟ. ಯಾರ ಸುಳಿವಿಗೂ ಸಿಕ್ಕದ ಮನಸ್ಸವರದು. ಗಾಳಿಯಂತೆ ಹಗುರವಾಗಿ ಕಂಡರೂ ಬಲು ಸೂಕ್ಷ್ಮಬುದ್ಧಿ. ಆಕೆಯ ವ್ಯಕ್ತಿತ್ವದಲ್ಲಿ ಅನೇಕ ಮುಖಗಳಿವೆ. ಅವುಗಳಲ್ಲಿ ಕೆಲವು ಶ್ರೇಷ್ಠವಾದುವು. ಇನ್ನು ಕೆಲವು ಪ್ರಾಮುಖ್ಯವಾದುವು. ನೆಲೆಗೆ ಸಿಕ್ಕದ ಗಾಂಭೀರ್ಯದ ಚೇತನಶಕ್ತಿಗಳವು.

ಪಂಡಿತ ಜವಹರಲಾಲರು, "ದಿ ಡಿಸ್ಕವರಿ ಆಫ್ ಇಂಡಿಯ" ಎಂಬ ತಮ್ಮ ಹೊಸ ಪುಸ್ತಕದಲ್ಲಿ ಕಮಲರವರ ಬಗ್ಗೆ ಬರೆಯುತ್ತಾ 'ನಮ್ಮ ಮದುವೆಯಾಗಿ ೨೦ ವರ್ಷಗಳ ಮೇಲಾಗಿ ಹೋಗಿತ್ತು. ಆ ಅವಧಿಯಲ್ಲಿ ಕಮಲ ಅವಳ ಮನಸ್ಸಿನ ಮತ್ತು ಅಧ್ಯಾತ್ಮಿಕ ಬೆಳವಣಿಗೆಗಳಲ್ಲಿ ಅನೇಕ ಸಲ ಹೊಸ ಬೆಳಕನ್ನು ತೋರಿಸಿ ನನ್ನನ್ನು ಚಕಿತಳನ್ನಾಗಿ ಮಾಡಿದ್ದಾಳೆ. ಅವಳನ್ನು ನಾನು ಅನೇಕ ಮುಖಗಳಲ್ಲಿ ಕಂಡುಕೊಂಡಿದ್ದೇನೆ. ಕೊನೆಕೊನೆಗಂತೂ ಅವಳನ್ನರಿಯಲು ಬಹಳ ಪ್ರಯತ್ನ ಮಾಡಿದ್ದೇನೆ. ಆ ಪ್ರಯತ್ನಕ್ಕೆ ಕಮಲ ನನಗೆ ಬಹಳ ನೆರವಾದಳು. ಆದರೆ ನಾನು ಅವಳ ನಿಜವಾದ ಶಕ್ತಿಯನ್ನು ಅಥವಾ ಅವಳ ಸಂಪೂರ್ಣ ವ್ಯಕ್ತಿತ್ವವನ್ನು ಅರಿತು ಅರ್ಥಮಾಡಿ

ಕೊಂಡೆನೆಂದು ಹೇಳಲು ಧೈರ್ಯವಿಲ್ಲದೆ ಹಿಂಜರಿಯುತ್ತೇನೆ. ಯಕ್ಷಿಣಿ ಯಂತೆ ಗಾಂಧರ್ವ ಮನಸ್ಸವಳದು; ತಿಳಿದುಕೊಳ್ಳುವುದೂ ಕಷ್ಟ, ಕೆಲವು ಸಲ ನಾನು ಅವಳನ್ನೇ ದಿಟ್ಟಿಸಿ ನೋಡಿದಾಗ ಯಾರೋ ಅಪರಿಚಯಸ್ತ ರೊಬ್ಬರು ನನ್ನನ್ನು ನೋಡುತ್ತಿದ್ದಂತೆ ನನಗೆ ಭಾಸವಾಗುತ್ತಿತ್ತು' ಎಂದು ಹೇಳಿದ್ದಾರೆ.

ಕಮಲರವರ ವ್ಯಕ್ತಿತ್ವದ ಸ್ವಲ್ಪ ಭಾಗವನ್ನು ತಿಳಿದುಕೊಂಡರೆಂದು ಅನ್ನುತ್ತಿದ್ದಾಗಲೇ ಅವರು ಆ ಹಿಡಿತದಿಂದ ತಪ್ಪಿಸಿಕೊಂಡು ಅವರ ಅಭಿ ಪ್ರಾಯದಿಂದ ದೂರವಾಗುತ್ತಿದ್ದರು. ಅವರನ್ನು ಯಾರು ಚೆನ್ನಾಗಿ ತಿಳಿದಿರ ಲಿಲ್ಲವೋ ಅವರಲ್ಲಿ ಕಮಲನೆಹರು ಹೊರಗಿನವರಂತೆ ವರ್ತಿಸುತ್ತಿದ್ದರು. ಹೆಚ್ಚು ಸಲಿಗೆಯೇ ಇರುತ್ತಿರಲಿಲ್ಲ. ಆದರೆ ಹತ್ತಿರದವರಲ್ಲಿ, ತಿಳಿದವರಲ್ಲಿ ಆತ್ಮೀಯರಲ್ಲಿ ಸಂತೋಷಭರಿತರಾಗಿ, ಧಾರಾಳವಾಗಿ, ಯಾವ ಸಂಕೋಚ, ರಹಸ್ಯವೂ ಇಲ್ಲದೆ ನಡೆದುಕೊಳ್ಳುತ್ತಿದ್ದರು.

ಕಮಲಾನೆಹರು ನಿರ್ಣಯ ತೆಗೆದುಕೊಳ್ಳುವುದರಲ್ಲಿ ಬಹಳ ಚುರುಕು. ಅದು ತಪ್ಪೋ ಸರಿಯೋ, ಒಂದು ಸಲ ನಿರ್ಣಯಿಸಿದ ಮೇಲೆ ಅದಕ್ಕೆ ಸರಿ ಯಾಗಿ ಅಂಟಿಕೊಳ್ಳುತ್ತಿದ್ದರು. ಅವರಲ್ಲಿ ಕಪಟದ ಸೋಂಕೇ ಇರುತ್ತಿರ ಲಿಲ್ಲ. ಆತ್ಮದ್ರೋಹ ಕಂಡರಿಯರು. ಪರನಿಂದೆ ಅವರಿಗೆ ಬಲು ದೂರ.

ಕಮಲಾನೆಹರೂ ಬೆಳೆದದ್ದು ಸಿರಿವಂತರ ಮನೆಯಲ್ಲಿ. ೧೯೩೬ರ ವರೆಗೆ ಆಕೆಗೆ ದುಃಖ ಮತ್ತು ಕಷ್ಟ ಗೊತ್ತೇ ಇರಲಿಲ್ಲ. ಆಕೆಯ ಬಾಲ್ಯ ಜೀವನ ಪ್ರಪಂಚದಲ್ಲಿ ಯಾವ ಹೆದರಿಕೆಯೂ ಇರಲಿಲ್ಲ. ಜೀವನದಲ್ಲಿ ಭದ್ರತೆ ಇತ್ತು, ಶಾಂತಿಮಯ ವಾತಾವರಣವಿತ್ತು. ನಾಳೆಯ ಭೀತಿಯು ಸ್ವಲ್ಪವೂ ಇರಲಿಲ್ಲ. ಸ್ವಲ್ಪ ಕಾಲದಲ್ಲಿ ಎಲ್ಲವೂ ಬದಲಾವಣೆಯಾಯಿತು. ಒಂದು ಕಾಲಕ್ಕೆ ಶಾಂತವಾಗಿ ಭದ್ರವಾಗಿ ಕಂಡ ನಾಳೆಯ ಭವಿಷ್ಯ ತಟ್ಟನೆ ಬದಲಾಯಿಸಿ ಕಾಣದ ಕಾರ್ಮೋಡ ಕವಿಯಿತು. ಸುಖಸೌಲಭ್ಯಗಳ ತ್ಯಾಗ, ಹೃದಯದ ನೋವು ಮತ್ತು ಗಂಡನಿಂದ ಯಾವಾಗಲೂ ಅಗಲಿರ ಬೇಕಾದ ಸಂದರ್ಭಗಳು, ಸತತ ಖಾಹಿಲೆಗಳು, ಮುಂತಾದುವು ದಿನಗಟ್ಟಲೆಯು

ಮಾತಾಯಿತು. ಸಿರಿವಂತಿಕೆಯ ಗರ್ಭದಲ್ಲಿ ಬೆಳೆದ ಕಮಲಾ ಈ ಕಷ್ಟ ಗಳಿಗೆ ಹೆದರಲೂ ಇಲ್ಲ; ಹೀಗೇಕಾಯಿತೆಂದು ಪ್ರಶ್ನಿಸಲೂ ಇಲ್ಲ. ಹೆಣ್ಣಿಗೆ ದತ್ತವಾಗಿ ಬಂದ ತಾಳ್ಮೆಯಿಂದ ಎಲ್ಲವನ್ನೂ ಧೈರ್ಯದಿಂದ ಎದುರಿಸಿದರು. ತುಂಬಿದ ಕೊಡದಂತೆ, ಗಾಂಭೀರ್ಯದ ಸಿರಿ, ತಾಳ್ಮೆಯ ಹೊನ್ನು ಆಕೆಯಲ್ಲಿ ನೆಲೆಸಿತ್ತು.

## ನಂದಾದೀಪ

ಸುಶೀಲೆಯಾದ ಕಮಲಳ ಗರ್ಭದಲ್ಲಿ ಇಂದಿರಾ ಹುಟ್ಟಿದ ಏಳು ವರ್ಷ ಗಳ ನಂತರ ಒಂದು ಗಂಡು ಸಂತಾನವಾಯಿತು. ನೆಹರು ಮನೆತನದ ಬೆಳಕಾಗಿ ಆ ಜ್ಯೋತಿ ಬೆಳಗುವುದೆಂದು ಎಲ್ಲರ ಆಸೆಯಾಗಿತ್ತು. ಆದರೆ ಆ ಮಗು ಹುಟ್ಟಿದ ಮೂರೇ ದಿನಗಳಲ್ಲಿ ತೀರಿಕೊಂಡಿತು. ನೆಹರೂ ಮನೆ ತನದ ನಂದಾದೀಪ ನಂದಿಹೋಯಿತು. ವೃದ್ಧರಾದ ಮೋತೀಲಾಲರು ಬಹಳವಾಗಿ ಕೊರಗಿದರು. ಗಂಡು ಸಂತಾನವಿಲ್ಲದೆ ನೆಹರು ಮನೆತನದ ಬೆಳಕು ಆರಿಹೋಗುವುದೆಂದು ದುಃಖಿಸಿದರು. ಇತ್ತ ಕಮಲಾನೆಹರು ಆಗಾಗ್ಗೆ ಖಾಯಿಲೆ ಬೀಳುತ್ತಿದ್ದುದರಿಂದ ಮೋತೀಲಾಲರ ಕೊನೆಯ ಆಸೆ ಕೊನೆಗೂ ಕೈಗೂಡಲಿಲ್ಲ.

ಒಂದು ದಿನ ಮೋತೀಲಾಲರು ಸಂತಪ್ತಹೃದಯರಾಗಿ ಆನಂದಭವನ ದಲ್ಲಿ ಕುರ್ಚಿಯ ಮೇಲೆ ಕುಳಿತಿದ್ದರು. ಮಗ ಜವಹರಲಾಲ್ ಹೊರಗಿನಿಂದ ಅಂದಿನ ಕೆಲಸ ಮುಗಿಸಿಕೊಂಡು ಬಂದು ಅವರೂ ವಿಶ್ರಾಂತಿಗಯ್ಯಲು ಅಲ್ಲಿಯೇ ಸುಖಾಸೀನರಾದರು. ಮೋತೀಲಾಲರು ಒಮ್ಮಿಂದೊಮ್ಮೆಲೇ ಗದ್ಗದ ಸ್ವರದಿಂದ ಜವಹರಲಾಲರನ್ನುದ್ದೇಶಿಸಿ, "ಆನಂದಭವನದ ದೀಪ ಮುಂದೆ ಬೆಳಗುವರಾರು ? ನೀನು ಎರಡನೆಯ ಮದುವೆ ಮಾಡಿಕೋ" ಎಂದು ಹೇಳಿದರು. ಜವಹರರು ತಂದೆಗೆ ಎಂದೂ ಎದುರು ವಾದಿಸಿದವರೇ

ಅಲ್ಲ. ತಾಳ್ಮೆಯಿಂದ, ಕುಂದಿದ ಸ್ವರವುಳ್ಳವರಾದರೂ ದೃಢತೆಯಿಂದ, ಮಗಳು ಇಂದಿರೆಯ ಕಡೆ ಕೈತೋರಿಸುತ್ತಾ " ಅವಳೇ ಆನಂದಭವನದ ನಂದಾದೀಪ " ಎಂದರು.

ಮೋತೀಲಾಲರಿಗೆ ಸಮಾಧಾನಕರ ಉತ್ತರ ಅದು ಹೌದೋ ಅಲ್ಲವೋ, ಜವಹರಲಾಲರು ಮಾತ್ರ ಹೃದಯತುಂಬಿದವರಾದರು.

## ಚ ಳು ವ ಳಿ

ವಿವಾಹವಾದ ಮೇಲೆ ಜವಹರಲಾಲ್, ಎರಡು ವರ್ಷ ಬ್ಯಾರಿಸ್ಟರ್ ಆಗಿ ಕೆಲಸ ಮಾಡಿದರು. ಆಸಕ್ತಿ ಇಲ್ಲದ ಕೆಲಸ ಯಾವಾಗಲೂ ಅಪೂರ್ಣವೇ. ಜವಹರರ ಮನಸ್ಸು ನಾಗಾಲೋಟದಿಂದ ಭಾರತದ ರಾಜಕೀಯದ ಬಿರುಗಾಳಿಯತ್ತ ಓಡುತ್ತಿತ್ತು. ೧೯೧೯ರಲ್ಲಿ ಜಲಿಯನ್‌ವಾಲಾಬಾಗ್‌ನಲ್ಲಿ ಹರಿದ ರಕ್ತದ ಕೋಡಿ, ಪಂಜಾಬಿನ ದುರಂತ, ಖಿಲಾಫತ್ ಚಳುವಳಿ, ರೌಲತ್ ಕಾಯದೆಯ ಫಲಗಳು ದೇಶದ ಮೇಲೆ ಹಾಗೂ, ನೆಹರೂ ಮನೆತನದ ಮೇಲೆ ವಿಶೇಷ ಪರಿಣಾಮವನ್ನುಂಟುಮಾಡಿದುವು. ಗಾಂಧಿಜೀಯವರು ದಕ್ಷಿಣ ಆಫ್ರಿಕದ ವಿಜಯದೊಂದಿಗೆ ಭಾರತಕ್ಕೆ ಬಂದು ಭಾರತದ ರಾಜಕೀಯ ಸೂತ್ರ ವಹಿಸಿಕೊಂಡರು. ೧೯೨೦ರಲ್ಲಿ ಗಾಂಧಿಜೀ ಅಸಹಕಾರ ಚಳುವಳಿಯ ಸತ್ಯಾಗ್ರಹ ಪ್ರಾರಂಭಿಸಿದರು.

ಆನಂದಭವನದಲ್ಲಿ ತಂದೆ ಮಕ್ಕಳಿಗೆ, ಗಾಂಧಿಜೀ ಚಳುವಳಿಯ ವಿಷಯವಾಗಿ ಪ್ರತಿದಿನವೂ ಬಿಸಿಬಿಸಿ ಚರ್ಚೆಗಳಾಗಲು ಪ್ರಾರಂಭವಾಯ್ತು. ಜವಹರರು ಗಾಂಧಿಜೀಯ ಕಾರ್ಯಕ್ರಮವನ್ನು ಒಪ್ಪಿ ಸತ್ಯಾಗ್ರಹದಲ್ಲಿ ಧುಮುಕಲು ಮನಸ್ಸುಮಾಡಿದರು. ಮೋತೀಲಾಲರಿಗೆ ಗಾಂಧಿಜೀಯ ಕಾರ್ಯಕ್ರಮದಲ್ಲಿ ಅಷ್ಟು ನಂಬಿಕೆ ಇರಲಿಲ್ಲ. ಮೋತೀಲಾಲರಿಗೂ ಜವಹರರಿಗೂ ಆಗುತ್ತಿದ್ದ ರಾಜಕೀಯ ಜಗಳ ಮನೆಯಲ್ಲಿ ಕಮಲಾನೆಹರು,

ಸ್ವರೂಪರಾಣಿಯವರ ಮೇಲೆ ಪರಿಣಾಮ ಮಾಡಿತು. ಕಮಲಾನೆಹರೂ ಮಾವ ಮತ್ತು ಪತಿಯ ನಡುವೆ ಎಷ್ಟೋ ಸಲ ರಾಯಭಾರಿಯಾಗಿ ಜಗಳ ನಿಲ್ಲಿಸುತ್ತಿದ್ದರು.

ಮದುವೆಯಾದ ಕೆಲವೇ ದಿನಗಳಲ್ಲಿ ಜವಹರರು ರಾಜಕೀಯದ ಬಿರುಗಾಳಿಯಲ್ಲಿ ಸೆರೆಸಿಕ್ಕಿದರು. ಜೀವನದ ಗೆಳತಿಗೆ ಸಲ್ಲಬೇಕಾದ ಆತ್ಮೀಯತೆಯನ್ನು ನೀಡಲು ಸಮಯ ಸಂದರ್ಭಗಳು ಸಾಕಷ್ಟು ಒದಗಲಿಲ್ಲ. ಆದರೂ ಜವಹರಲಾಲರು ಕಮಲಾರನ್ನು ಮಾತ್ರ ಮರೆಯಲಿಲ್ಲ. ಮರೆಯಲು ಸಾಧ್ಯವೆ ? ಸೆರೆಮನೆಯಿಂದ ಬಿಡುಗಡೆಯಾಗಿ ಹೊರಗೆ ಸ್ವತಂತ್ರವಾಗಿದ್ದ ಕಾಲದಲ್ಲಿ ಕಮಲಾರವರ ಸಂಗಡ ಕೆಲಕಾಲ ಕಳೆಯುತ್ತಿದ್ದರು. ಕಮಲಾ, ಜವಹರರ ಆಸರೆಯಾಗಿದ್ದರು. ಜವಹರರು ರಾಜಕೀಯದ ಕೆಲಸಕ್ಕಾಗಿ ದೂರದೇಶಗಳಿಗೆ ಹೋಗಿ ಮನೆಗೆ ಬಂದಾಗ ಕಮಲಾ ಅವರಿಗೆ ಕೊಡುತ್ತಿದ್ದ ವಿಶ್ರಾಂತಿ ಮತ್ತು ಸ್ಫೂರ್ತಿಶಕ್ತಿ ಜವಹರರು ಅನೇಕ ಸಲ ಸ್ಮರಿಸಿಕೊಂಡಿದ್ದಾರೆ. ಜರ್ಝರಿತವಾದ ಮನಸ್ಸಿಗೆ ಬಳಲಿದ ದೇಹಕ್ಕೆ ಕಮಲಾನೆಹರೂ, ಶಾಂತಿ ನೆಮ್ಮದಿಯನ್ನು ಕೊಡುತ್ತಿದ್ದರು.

ಕೊನೆಗೆ ಗಾಂಧಿಜೀಗೇ ಜಯವಾಯಿತು. ಮೋತೀಲಾಲರು ಜವಹರರೊಂದಿಗೆ ಸತ್ಯಾಗ್ರಹ ಚಳುವಳಿಗೆ ಸೇರಲು ನಿರ್ಧರಿಸಿದರು. ೧೯೨೧ನೇ ಡಿಸೆಂಬರ್ ೬ನೇ ದಿನ ಮೋತೀಲಾಲ್ ಮತ್ತು ಜವಹರರಿಬ್ಬರೂ ದಸ್ತಗಿರಿಯಾದರು. ಆನಂದಭವನ ಪೋಲೀಸರನ್ನು ಕಂಡದ್ದು ಅದೇ ಮೊದಲದಿನ. ಅಂದಿನಿಂದ ಪ್ರಾರಂಭವಾದ ಪೋಲೀಸರ ಧಾಳಿ ಭಾರತಕ್ಕೆ ಸ್ವಾತಂತ್ರ್ಯ ಬರುವ ವರೆಗೂ ನಡೆಯಿತು. ಧೀರಳಾದ ಸ್ವರೂಪರಾಣಿ ತನ್ನ ಗಂಡ ಮತ್ತು ಮಗನನ್ನು ಸೆರೆಮನೆಗೆ ನಗುನಗುತ್ತ ಬೀಳ್ಕೊಟ್ಟಳು. ಕಮಲಾ ಜವಹರರ ಅಗಲಿಕೆಯಿಂದ ನೊಂದಿದ್ದರೂ ಧೈರ್ಯದಿಂದ ವರ್ತಿಸಿದರು. ಆನಂದಭವನ ದುಃಖದ ಬೀಡಾಯಿತು. ಎಲ್ಲರ ನಗುಮುಖಗಳ ಮೇಲೂ ದುಃಖದ ಪರದೆ ಎಳೆಯಲ್ಪಟ್ಟಿತು. ಆನಂದಭವನವೇ ಶೋಕಸಾಗರದಲ್ಲಿ ಮುಳುಗಿತು.

ಕಾಂಗ್ರೆಸ್ ಅಧಿವೇಶನ ಆ ಸಾರೆ ಅಹಮದಾಬಾದಿನಲ್ಲಿ ನಡೆಯಿತು. ಗಾಂಧಿಜೀ, ನೆಹರು ಮನೆತನದವರಿಗೆಲ್ಲಾ ಅಲ್ಲಿಗೆ ಬರಲು ಆಮಂತ್ರಣ

ವಿತ್ತಿದ್ದರು. ಕಮಲಾನೆಹರು, ಮಗಳು ಇಂದಿರಾ, ಅತ್ತೆ ಸ್ವರೂಪರಾಣಿ, ನಾದಿನಿ ಕೃಷ್ಣಾ ಇವರೊಂದಿಗೆ ಅಹಮದಾಬಾದಿಗೆ ಪ್ರಯಾಣ ಬೆಳೆಸಿದರು. ಪ್ರತಿಯೊಂದು ರೈಲ್ವೆ ಸ್ಟೇಷನ್ನಿನಲ್ಲಿಯೂ ಕಮಲಾರವರಿಗೆ ಅಭೂತಪೂರ್ವ ಸ್ವಾಗತ ಕೊಟ್ಟು ಹಾರತುರಾಯಿಗಳನ್ನು ಅರ್ಪಿಸಿದರು. ನೆಹರೂಮನೆತನಕ್ಕೆ ದೇಶದ ಕಾಣಿಕೆ ಅದು. ಅಧಿವೇಶನ ನಡೆಯುವ ವರೆಗೆ ಸಾಬರಮತಿ ಆಶ್ರಮದಲ್ಲಿ ಗಾಂಧಿಜೀ ಬಳಿಯಲ್ಲಿದ್ದರು. ೧೫ ದಿನಗಳ ನಂತರ ಪುನಃ ಅಲಹಾಬಾದಿಗೆ ಬಂದರು. ೧೯೩೨ರ ವೇಳೆಗೆ ಎಲ್ಲ ರಾಜಕೀಯ ಖೈದಿಗಳನ್ನು ಸರ್ಕಾರ ಬಿಡುಗಡೆ ಮಾಡಿತು, ಆಗ ಮೋತೀಲಾಲರು ಮತ್ತು ಜವಹರಲಾಲರು ಬಿಡುಗಡೆಯಾದರು. ಆನಂದಭವನ ಮತ್ತೊಮ್ಮೆ ಕಳೆಕಟ್ಟಿತು.

## ತೀವ್ರ ಕಾಹಿಲೆ

೧೯೩೨ರಲ್ಲಿ ನಾಭಾ ಸಂಸ್ಥಾನದಲ್ಲಿ ಜವಹರರ ದಸ್ತಗಿರಿಯಾಯಿತು. ಬಿಡುಗಡೆಯಾಗಿ ಬಂದಾಗ ಜೊತೆಗೆ ಟೈಫಾಯಿಡ್ ಜ್ವರವನ್ನು ಕಟ್ಟಿಕೊಂಡು ಬಂದಿದ್ದರು. ಕಮಲಾರವರ ಆರೈಕೆ ಆಗ ಇಲ್ಲದಿದ್ದರೆ ಜವಹರರು ಅಷ್ಟು ಬೇಗನೆ ಗುಣಮುಖರಾಗುತ್ತಿರಲಿಲ್ಲ.

ಗಯಾ ಕಾಂಗ್ರೆಸ್ ಅಧಿವೇಶನದ ನಂತರ ಮೋತೀಲಾಲರು ಮತ್ತು ಚಿತ್ತರಂಜನದಾಸರು ಸ್ವರಾಜ್ಯಪಕ್ಷವನ್ನು ಸ್ಥಾಪಿಸಿದರು. ಅವರಿಬ್ಬರೂ ಜೀವನದ ಗೆಳೆಯರಾಗಿದ್ದರು. ಸ್ವರಾಜ್ಯಪಕ್ಷದ ಅಧ್ಯಕ್ಷರಾಗಿ ದಾಸರೂ, ಕಾರ್ಯದರ್ಶಿಯಾಗಿ ಮೋತೀಲಾಲರೂ ಅದರ ಸಾರಥ್ಯ ನಡೆಯಿಸಿದರು. ಕೇಂದ್ರ ಮತ್ತು ಪ್ರಾಂತೀಯ ಶಾಸನಸಭೆಗಳ ಚುನಾವಣೆಗಳಲ್ಲಿ ಅದ್ಭುತ ಜಯಗಳಿಸಿ ದೇಶದಲ್ಲೆಲ್ಲಾ ಹೊಸ ಚೈತನ್ಯವನ್ನುಂಟುಮಾಡಿದರು. ೧೯೨೫ರಲ್ಲಿ ಚಿತ್ತರಂಜನದಾಸರು ಮರಣಹೊಂದಿದರು. ಅವರ ನಂತರ ಮೋತೀಲಾಲರೇ ಅಧ್ಯಕ್ಷರಾದರು.

೧೯೨೫ರ ವೇಳೆಗೆ ಕಮಲಾನೆಹರು ತೀವ್ರಕಾಹಿಲೆಯಿಂದ ಹಾಸಿಗೆ ಹಿಡಿದರು. ಅನೇಕ ವರ್ಷಗಳಿಂದ ಕಮಲಾ ರೋಗದಲ್ಲಿಯೇ ನರಳುತ್ತಾ ಇದ್ದರು. ವೈದ್ಯರು ಸ್ವಿಟ್ಜರ್ಲೆಂಡಿಗೆ ಕರೆದುಕೊಂಡುಹೋಗಬೇಕೆಂದು ಸಲಹೆ ಕೊಟ್ಟರು. ೧೯೨೬ನೇ ಮಾರ್ಚ್ ತಿಂಗಳಲ್ಲಿ ಪಂಡಿತ ಜವಾಹರಲಾಲ ನೆಹರು, ಕಮಲಾ, ಇಂದಿರಾ, ಸ್ವರೂಪರಾಣಿ ಮತ್ತು ರಣಜಿತ್ ಪಂಡಿತ್ ಇವರೊಂದಿಗೆ ಯುರೋಪಿನ ಸುಪ್ರಸಿದ್ಧ ಆರೋಗ್ಯಧಾಮಗಳಿಗೆ ನೆಲೆವೀಡಾದ ಸುಂದರ ಸ್ವಿಟ್ಜರ್ಲೆಂಡಿಗೆ ಪ್ರಯಾಣ ಬೆಳೆಸಿದರು. ಕಮಲಾನೆಹರು ತಿಂಗಳು ಗಟ್ಟಲೆ ಲಕ್ನೋ ನಗರದಲ್ಲಿ ಆಸ್ಪತ್ರೆಯಲ್ಲಿದ್ದರೂ ಗುಣಮುಖರಾಗಿರಲಿಲ್ಲ. ನಿಶ್ಪ್ರಾಣರಾಗಿ ಬರಿ ಎಲುಬದೇಹವಾಗಿದ್ದರು. ಗುಡ್ಡಗಾಡಿನ ಆರೋಗ್ಯ ಕೇಂದ್ರಗಳಾದ ಮೊಂಟಾನಾದಲ್ಲಿ, ಜಿನೀವಾದಲ್ಲಿ, ಹಾಗೂ ಸ್ವಿಟ್ಜರ್ಲೆಂಡಿನಲ್ಲಿ ಆರೋಗ್ಯಭಾಗ್ಯ ಪಡೆದರು. ಸ್ವಲ್ಪ ದಿನಗಳ ನಂತರ ನೆಹರು ತಂಗಿ ಕೃಷ್ಣಾ ಬಂದು ಕಮಲಾರನ್ನು ಸೇರಿದರು. ಕಮಲಾರವರಿಗೆ ಆಗ ತುಂಬಾ ಸಂತೋಷ. ರೋಗ ವೇಗವಾಗಿ ಗುಣವಾಗುತ್ತ ಬಂದಿತು. ಮಾವಂದಿರಾದ ಮೋತೀಲಾಲರು ಅದೇ ಸಮಯಕ್ಕೆ ವಿಶ್ರಾಂತಿ ಪಡೆಯಲು ಯೂರೋಪಿಗೆ ತೆರಳಿದ್ದರು. ಯೂರೋಪಿನಲ್ಲಿ ಕೆಲವು ತಿಂಗಳು ಕಳೆದ ನಂತರ ಕಮಲಾ ನೆಹರು, ಜವಾಹರಲಾಲರು ೧೯೨೭ರ ಡಿಸೆಂಬರ್‌ನಲ್ಲಿ ನಡೆದ ಮದ್ರಾಸ್ ಕಾಂಗ್ರೆಸ್ ಅಧಿವೇಶನದ ಹೊತ್ತಿಗೆ ಭಾರತಕ್ಕೆ ಬಂದರು.

## ಕಲ್ಕತ್ತಾ ಕಾಂಗ್ರೆಸ್

೧೯೨೮ರಲ್ಲಿ ಕಲ್ಕತ್ತಾ ನಗರದಲ್ಲಿ ಕಾಂಗ್ರೆಸ್ ಅಧಿವೇಶನ ಸೇರಿತು. ಪಂಡಿತ ಮೋತೀಲಾಲರೇ ಅದರ ಅಧ್ಯಕ್ಷಪದವಿಯನ್ನಲಂಕರಿಸಿದ್ದರು. ಸೊಸೆ ಕಮಲಾಗೆ ಸಂಭ್ರಮವೇ ಸಂಭ್ರಮ. ಆದರೆ ಈ ಅಧಿವೇಶನದಲ್ಲಿಯೇ ಪಂಡಿತ ಮೋತೀಲಾಲರಿಗೂ ಮತ್ತು ಜವಹರರಿಗೂ ಬಹಿರಂಗವಾಗಿ ರಾಜಕೀಯ ವಿರೋಧ ತಲೆದೋರಿತು. ಮೋತೀಲಾಲರ ಸಾಮಂತರಾಜ್ಯ

ಪದ್ಧತಿಯನ್ನು ಜವಹರರು ಪ್ರಬಲವಾಗಿ ವಿರೋಧಿಸಿದರು. ಸುಭಾಷಚಂದ್ರ ಬೋಸರು ತಂದ ಸಂಪೂರ್ಣ ಸ್ವಾತಂತ್ರ್ಯದ ನಿರ್ಣಯ ಬಿದ್ದುಹೋಯಿತು.

ಭಾರತದಲ್ಲಿ ಆ ವರ್ಷ ತರುಣರು ಎಚ್ಚೆತ್ತರು. ಹೊಸ ಚೇತನದ ಗಾಳಿಯೊಂದು ಬೀಸಿತು. ಆ ನವ ಚೈತನ್ಯವನ್ನು ಮಟ್ಟಹಾಕಲು ಯಾರಿಂದಲೂ ಸಾಧ್ಯವಾದಂತೆ ತೋರಲಿಲ್ಲ. ರೈತರು, ಕೂಲಿಕಾರರು, ವಿದ್ಯಾರ್ಥಿಗಳು, ಯುವಕರು ರಾಜಕೀಯದ ಅಭ್ಯಾಸದ ಫಲವಾಗಿ ಹೊಸ ಹುರುಪಿನಿಂದ ಕ್ರಾಂತಿಯ ಸೆರಗಿನಲ್ಲಿದ್ದರು.

## ಸ್ವಾತಂತ್ರ್ಯ ಪ್ರತಿಜ್ಞೆ

ಈ ಹೊಸ ಶಕ್ತಿಯನ್ನರಿತ ಗಾಂಧಿಜೀ ತರುಣರ ನಾಯಕನಾದ ಜವಹರರನ್ನೇ ಕಾಂಗ್ರೆಸ್ ಅಧ್ಯಕ್ಷಪದವಿಗೆ ಸೂಚಿಸಿದರು. ಕಲ್ಕತ್ತೆಯಲ್ಲಿ ತಂದೆ ಅಧ್ಯಕ್ಷರು; ಲಾಹೋರಿನಲ್ಲಿ ಮಗ. ಪ್ರಪಂಚದ ಇತಿಹಾಸದಲ್ಲಿ ತಂದೆಯಿಂದ ಮಗನಿಗೆ ಈ ತೆರನಾದ ಪಟ್ಟ ಬಂದುದು ಇದೇ ಮೊದಲನೆಯ ಉದಾಹರಣೆ. ಲಾಹೋರ್ ಕಾಂಗ್ರೆಸ್ಸಿನ ಅಧ್ಯಕ್ಷರಾಗಿ ರಾಷ್ಟ್ರಪತಿಯಾಗಿ ವಿರಾಜಿಸಿದರು ಜವಹರಲಾಲ್. ರಾಷ್ಟ್ರಪತಿಯ ಪತ್ನಿಯಾಗಿ ಕಮಲಾ ಜವಹರರ ಕೆಲಸದಲ್ಲಿ ಸಹಕಾರ ನೀಡಿದರು. ರಾಷ್ಟ್ರಪತಿಯಾಗುವುದು ಒಂದು ಭಾಗ್ಯ. ಅದು ಎಲ್ಲರಿಗೂ ಸಿಕ್ಕುವುದು ದುರ್ಲಭ.

ಈ ಅಧಿವೇಶನ ಮಹತ್ವದ್ದಾಗಿತ್ತು. ಡಿಸೆಂಬರ್ ತಿಂಗಳಿನ ಚಳಿಯನ್ನು ಕೂಡ ಲಕ್ಷಿಸದೆ ಲಕ್ಷಾಂತರ ಜನ ರಾವಿ ನದಿಯ ದಂಡೆಯ ಮೇಲೆ ಸಭೆ ಸೇರಿ ಸಂಪೂರ್ಣ ಸ್ವಾತಂತ್ರ್ಯ ಗಳಿಸಲು ಪಣತೊಟ್ಟರು. ರಾಷ್ಟ್ರಪತಿ ಜವಹರರು, ಆ ಸ್ವಾತಂತ್ರ್ಯಪ್ರತಿಜ್ಞೆಯನ್ನು ಓದಿದರು. ನೆರೆದಿದ್ದ ಸಭಿಕರ ಸಮುದಾಯ ಅದನ್ನು ಪಠಿಸಿತು.

# ಸತ್ಯಾಗ್ರಹದ ಮಡಿಲಲ್ಲಿ

ದಾಂಡಿ ಮೆರವಣಿಗೆ ಪ್ರಪಂಚದಲ್ಲಿ ಹೊಸ ಚರಿತ್ರೆಯನ್ನು ಸೃಷ್ಟಿಸಿತು. ಪ್ರಪಂಚದ ದೃಷ್ಟಿಕೋನವೆಲ್ಲ ಆಗ ಭಾರತದ ಕಡೆ ತಿರುಗಿತ್ತು. ರಾಷ್ಟ್ರದ ಸ್ವಾತಂತ್ರ್ಯದ ವಿರುದ್ಧ ಪಾಶವೀ ಶಕ್ತಿಯನ್ನು ಪ್ರತಿಭಟಿಸಲು ಅದು ಚಿಕ್ಕ ಉದಾಹರಣೆಯಾಗಿತ್ತು. ಬಂಡವಾಳಗಾರರ ಮೇಲೆ ಬಡವನ ದಂಗೆಯ ರೂಪದ ಪ್ರತೀಕವಾಗಿತ್ತು. ವಿಶಾಲವಾದ ಸಮುದ್ರದಿಂದ ಒಂದು ಹಿಡಿ ಉಪ್ಪನ್ನು ತಯಾರಿಸಲು ಈ ಬಡಕಲು ಶರೀರದ ವ್ಯಕ್ತಿಯ ದಾಂಡಿಯ ಮೆರವಣಿಗೆಯು, ಸೀಸರನು ರೂಬಿಕಾನ್ ನದಿಯನ್ನು ದಾಟಿ ರೋಮ್ ಸಾಮ್ರಾಜ್ಯ ಕಟ್ಟಲು ಹವಣಿಸಿದುದಕ್ಕಿಂತ ಮೇಲಾಗಿತ್ತು. ಸಾಬರಮತಿ ನದಿಯಿಂದ ಅರಬ್ಬೀ ಸಮುದ್ರದ ೨೦೦ ಮೈಲಿಯ ನಡೆಗೆ, ಗಾಂಧಿಜೀ ೭೮ ಸತ್ಯಾಗ್ರಹಿಗಳ ತಂಡ ಕಟ್ಟಿಕೊಂಡು ಹೊರಟಿದ್ದರು. ೧೯೩೦ನೇ ಮಾರ್ಚ್ ೧೨ನೇ ತಾರೀಖು ಈ ಹೊಸ ವಿಧವಾದ ಸತ್ಯಾಗ್ರಹ ಪ್ರಾರಂಭವಾಯಿತು. ಭಾರತದ ತುಂಬಾ ಈ ಉಪ್ಪಿನ ಸತ್ಯಾಗ್ರಹ ಭರದಿಂದ ಸಾಗಿತು. ಅಲಹಾಬಾದಿನಲ್ಲಿ ಪಂಡಿತ ಜವಹರಲಾಲರು ಪ್ರಥಮತಃ ಉಪ್ಪು ತಯಾರಿಸಿ ಸತ್ಯಾಗ್ರಹ ಪ್ರಾರಂಭ ಮಾಡಿದರು.

ಪಂಡಿತ ಜವಹರಲಾಲರ ದಸ್ತಗಿರಿಯಾಯಿತು. ಗಂಡನ ಕೆಲಸದ ಜವಾಬ್ದಾರಿ ಕಮಲಾ ವಹಿಸಿಕೊಂಡರು. ಅಸಹಕಾರ ಚಳುವಳಿಯಲ್ಲಿ ಕಮಲಾನೆಹರು ಪಾತ್ರ, ಭಾರತದ ಜನ, ಮಹಿಳೆಯರು ಮರೆಯಲಾರರು. ಜವಹರಲಾಲರನ್ನು ಮದುವೆಯಾದ್ದರಿಂದ ಆಕೆ ರಾಜಕೀಯದಲ್ಲಿ ಪ್ರತ್ಯಕ್ಷವಾಗಿ ಭಾಗ ತೆಗೆದುಕೊಳ್ಳಲು ಸ್ವಲ್ಪ ತಡೆಯಾಯಿತೋ ಎಂಬ ರೀತಿಯಲ್ಲಿ ಕಾಣುತ್ತಿತ್ತು. ಪಂಡಿತ ಜವಹರಲಾಲರ ಅದ್ಭುತವಾದ ವ್ಯಕ್ತಿತ್ವ ಆಕೆಯ ಮೇಲೆ ಬಿದ್ದು, ಆಕೆ ಜವಹರಲಾಲರ ಬರೀ ನೆರಳಿನಂತೆ ಭಾಸವಾಗುತ್ತಿತ್ತು. ಆದರೂ ಕಮಲಾ ತಮ್ಮ ಮೇಧಾಶಕ್ತಿ ಮತ್ತು ಕಾರ್ಯಶಕ್ತಿಯಿಂದ ತಮ್ಮದೇ ಆದ ಒಂದು ವಿಶಿಷ್ಟ ವ್ಯಕ್ತಿತ್ವವನ್ನು ಬೆಳೆಸಿಕೊಂಡರು. ಸಾವಿನ ಬಲೆಯಲ್ಲಿ ಜಾಗ್ರತೆ ಸಿಕ್ಕಿಬೀಳದಿದ್ದರೆ, ಅವರ ಶಕ್ತಿಯ ದರ್ಶನವು ಆಗುತ್ತಿತ್ತು. ಆಕೆ ಜವಹರಲಾಲರ ಹೆಂಡತಿಯೆಂದು ಹೆಸರುಗಳಿಸಲು ಎಂದೂ ಒಪ್ಪಲಿಲ್ಲ.

ದೇಶದ ಸ್ವಾತಂತ್ರ್ಯಕ್ಕೆ ತನ್ನದೇ ಆದ ಕಾಣಿಕೆಯನ್ನರ್ಪಿಸಿ ಅದರಲ್ಲೇ ತನ್ನ ಜೀವನವನ್ನು ಬಲಿದಾನ ಮಾಡಿದ ವೀರ ರಮಣಿ ಎಂದು ಪರಿಗಣಿಸಲು ಇಷ್ಟಪಟ್ಟಿದ್ದಳು. ಈ ಆದರ್ಶ ರಮಣಿಯನ್ನು ಭಾರತ ಮುಕ್ತಕಂಠದಿಂದ ಸ್ಮರಿಸಿಕೊಂಡಿತು.

ಪಂಡಿತ ಜವಹರಲಾಲರು ದಸ್ತಗಿರಿಯಾಗುವುದಕ್ಕಿಂತ ಮುಂಚಿತವಾಗಿ ಇಬ್ಬರೂ ಜೊತೆಯಾಗಿ ಕೆಲಸ ಮಾಡಿದರು. ರಾಜಕೀಯ ಕಾರ್ಮೋಡಗಳು ಕವಿದು ದೇಶದಲ್ಲೆಲ್ಲಾ ವಿಪ್ಲವವಾಗುವ ಕ್ರಾಂತಿಯ ಕಾಲವದು. ಅಸಹಕಾರ ಚಳುವಳಿ ಪ್ರಾರಂಭವಾಗಿ ಜವಹರರು ಏಪ್ರಿಲ್ ತಿಂಗಳಲ್ಲಿ ದಸ್ತಗಿರಿಯಾದರು. ಅಲಹಾಬಾದ್ ನಗರ ಮತ್ತು ಜಿಲ್ಲೆಯಲ್ಲಿ ಹೆಸರಾಂತ ಕಾಂಗ್ರೆಸ್ ಕಾರ್ಯಕರ್ತರೆಲ್ಲಾ ಸೆರೆಮನೆ ಸೇರಿದರು.

ಭಾರತದಲ್ಲಿ ಹೊಸ ಯುಗವೇ ಪ್ರಾರಂಭವಾಯಿತು. ಗಂಡಸರೆಲಾ ಸಾಮಾನ್ಯವಾಗಿ ಸೆರೆಮನೆ ಸೇರಿದ್ದರು. ಚಳುವಳಿ ನಡೆಸುವ ಜವಾಬ್ದಾರ್ರಿ ಹೆಣ್ಣುಮಕ್ಕಳ ಮೇಲೆ ಬಿದ್ದಿತು. ಈ ಸಲ ಚಳುವಳಿಯಲ್ಲಿ ಭಾಗವಹಿಸಿದಷ್ಟು ಸ್ತ್ರೀಯರು ಹಿಂದೆಂದೂ ಭಾಗವಹಿಸಿರಲಿಲ್ಲ. ಇದು ಬ್ರಿಟಿಷ್ ಸರಕಾರವನ್ನೇ ಅಲ್ಲದೆ ಭಾರತೀಯರನ್ನೂ ಅಚ್ಚರಿಗೊಳಿಸಿತು. ಶ್ರೀಮಂತ ಕನ್ನಿಕೆಯರು, ಮಧ್ಯಮತರಗತಿಯ ಸ್ತ್ರೀಯರು, ಕೂಲಿಕಾರ ಹೆಂಗಸರು, ಸಾವಿರಗಟ್ಟಲೆ ಪೋಲೀಸರ ಲಾಠಿ ಏಟಿನ ರುಚಿ ನೋಡಿದರು. ಸರ್ಕಾರದ ರಾಕ್ಷಸೀ ನಡವಳಿಕೆಗಳನ್ನು ತಮ್ಮ ಸ್ತ್ರೀಸಹಜವಾದ ವಿನಯದಿಂದ ಎದುರಿಸಿ ಸರ್ಕಾರವನ್ನು ನಾಚಿಸಿದರು. ಅವರು ನಡೆಸಿದ ಚಳುವಳಿಯ ವ್ಯವಸ್ಥೆಯು ತುಂಬಾ ಶ್ಲಾಘನೀಯವಾಗಿತ್ತು.

೧೯೩೦ರಲ್ಲಿ ಅಲಹಾಬಾದಿನಲ್ಲಿ ಎಲ್ಲ ಕೆಲಸಗಾರರೂ ಸೆರೆಮನೆಯನ್ನು ಸೇರಿದ್ದರು. ಚಳುವಳಿ ನಡೆಸುವ ದೊಡ್ಡ ಜವಾಬ್ದಾರಿ ಅನನುಭವಿಯಾದ ಕಮಲಾನೆಹರುರವರ ಮೇಲೆ ಬಿತ್ತು. ಧೈರ್ಯದಿಂದ ಮುಂದೆ ಬಂದು ಕೆಲಸದ ಜವಾಬ್ದಾರಿಯನ್ನು ಹೊತ್ತು ಯಶಸ್ವಿಯಾಗಿ ಕೆಲಸಮಾಡಿದರು. ಅವರಲ್ಲಿದ್ದ ಅಗಾಧವಾದ ಸಂಘಟನಾಶಕ್ತಿ ಮತ್ತು ಹುಮ್ಮಸ್ಸು ಅನುಭವ

ಇಲ್ಲವೆಂಬ ಕೊರತೆಯನ್ನು ಹೋಗಲಾಡಿಸಿ, ಸ್ವಲ್ಪ ಕಾಲದಲ್ಲಿಯೇ ಕಮಲಾ ನೆಹರು ಅಲಹಾಬಾದಿನ ಮಕುಟಮಣಿ, ಆದರ್ಶನಾರಿಯಾದರು.

ಕಮಲಾನೆಹರು ಅಲಹಾಬಾದಿನಲ್ಲಿ ಮೊದಲು ತೆಗೆದುಕೊಂಡ ಕೆಲಸ ಸ್ವಯಂಸೇವಕಿಯರ ತರಬೇತು. ನಾದಿನಿ ಕೃಷ್ಣಾ, ತನ್ನ ಉಪಾಧ್ಯಾಯಿನಿ ವೃತ್ತಿಗೆ ರಾಜೀನಾಮೆ ಕೊಟ್ಟು ರಾಜಕೀಯ ರಂಗದಲ್ಲಿ ಧುಮುಕಿ ಕಮಲಾ ರವರನ್ನು ಸೇರಿ, ಅವರ ಸಹಕೆಲಸಗಾರಳಾಗಿ ಸಹಾಯ ಮಾಡಿದಳು. ಬೆಳಗಿನಿಂದ ಸಾಯಂಕಾಲದ ವರೆಗೆ ಉರಿಯುವ ಬಿಸಿಲಲ್ಲಿ ಕೆಲಸವನ್ನು ಮಾಡುತ್ತಿದ್ದರು ಕಮಲಾ. ಪುರುಷರಂತೆ ಪೋಷಾಕು ಧರಿಸಿ, ಅವರಿಗೆ ಯಾವುದರಲ್ಲೂ ಕಡಿಮೆಯಿಲ್ಲವೆಂದು ತೋರಿಸಬೇಕೆಂದು ಅವರ ಮನಸ್ಸು. ಕಮಲಾ ಹೆಣ್ಣುಮಕ್ಕಳ ವಾದಿ. ಅವರ ಹಕ್ಕುಬಾಧ್ಯತೆಗಳ ವಿಷಯದಲ್ಲಿ ಗಂಡಸು ಸಮಾಜದ ಎದುರು ವಾದಿಸಿ ವಿರೋಧ ಕಟ್ಟಿಕೊಂಡ ಧೀರೆ. ಅವರ ವಿರೋಧದ ಬಿಸಿ ಜವಹರರಿಗೂ ತಟ್ಟಿತ್ತು.

ಸ್ವಯಂಸೇವಿಕೆಯರ ನಾಯಕಿಯಾಗಿ ಕಮಲಾನೆಹರು ಬೆಳಿಗ್ಗೆ ೫ ಘಂಟೆಗೆ ಎದ್ದು ಬೆಳಗಿನ ಕವಾಯತಿಗೆ ಸಿದ್ಧವಾಗಬೇಕಿತ್ತು. ೮ ಘಂಟೆಗೆ ವಿದೇಶೀ ವಸ್ತ್ರಗಳ ಬಹಿಷ್ಕಾರದ ಪ್ರಚಾರ, ಉಪ್ಪು ತಯಾರುಮಾಡುವಿಕೆ, ಮುಂತಾದ ಕೆಲಸಗಳಿಗೆ ಹೋಗಬೇಕಾಗಿತ್ತು. ಚಳಿಗಾಲ ಮತ್ತು ಬೇಸಿಗೆ ಕಾಲದ ಪರಿವೆಯಿಲ್ಲದೆ ಅವ್ಯಾಹತವಾಗಿ ಕಮಲಾನೆಹರು ಚಳುವಳಿಯ ಕೆಲಸ ಮಾಡಿದರು.

ಒಂದು ದಿನ ಕಮಲಾನೆಹರು ಮಟಮಟ ಮಧ್ಯಾಹ್ನ ತಮ್ಮ ಕಾರಿನಲ್ಲಿ ಕುಳಿತುಕೊಂಡು ವಿದೇಶೀ ವಸ್ತ್ರಗಳ ಬಹಿಷ್ಕಾರದ ಪ್ರಚಾರಕ್ಕಾಗಿ ಮುಖ್ಯವಾದ ಚೌಕಿಯೊಂದಕ್ಕೆ ತೆರಳಿದರು. ಅಂಗಡಿಗೆ ಬರುವವರಿಗೆಲ್ಲ ಉಪದೇಶ ಮಾಡಿ, ಕೆಲಸವಿಲ್ಲದಾಗ ಬಿಸಿಲ ಉರಿಯನ್ನು ತಾಳಲಾರದೆ ತಮ್ಮ ಕಾರಿನಲ್ಲಿ ಬಂದು ಕುಳಿತುಕೊಳ್ಳುತ್ತಿದ್ದರು. ಇದನ್ನು ನೋಡುತ್ತಿದ್ದ ಒಬ್ಬ ಮಹಾನುಭಾವ ಕಮಲಾರವರ ಹತ್ತಿರ ಬಂದು 'ವಿದೇಶೀ ವಸ್ತ್ರಗಳಿಗೆ ಬಹಿಷ್ಕಾರ ಹಾಕಿರೆಂದು ಉಪದೇಶ ಮಾಡುವ ನೀವು ವಿದೇಶೀ ಕಾರಿನಲ್ಲೇಕೆ

ಕೊಡುತ್ತೀರಿ' ಎಂದು ವ್ಯಂಗ್ಯವಾಗಿ ಹಾಸ್ಯಮಾಡಿದ. ಕಮಲಾ ಅದನ್ನು ಮನಸ್ಸಿಗೆ ಹಚ್ಚಿಕೊಳ್ಳಲಿಲ್ಲ. ಆದರೆ ಆ ಮಹಾನುಭಾವನ ವ್ಯಂಗ್ಯದಲ್ಲಿ ಸತ್ಯವಿದೆಯೆಂದು ತಿಳಿದು ತನ್ನ ಡ್ರೈವರನನ್ನು ಕರೆದು ಕಾರನ್ನು ವಾಪಸು ಆನಂದಭವನಕ್ಕೆ ಕಳುಹಿಸಿ, ಬಿಸಿಲಲ್ಲಿ ಬರೀ ಕಾಲಿನಲ್ಲಿ ಒಬ್ಬರೇ ಪಿಕೆಟಿಂಗ್ ಮಾಡುತ್ತ ನಿಂತರು. ಅಂದಿನಿಂದ ಅವರು ಚಳುವಳಿಯಲ್ಲಿ ಭಾಗವಹಿಸಿ ದಷ್ಟು ದಿನ ಕಾರನ್ನು ಉಪಯೋಗಿಸಲಿಲ್ಲ.

ಅಲಹಾಬಾದ್ ನಗರವೊಂದೇ ಆಕೆಯ ಕಾರ್ಯಕ್ಷೇತ್ರವಾಗಿರಲಿಲ್ಲ. ಜಿಲ್ಲೆಯಲ್ಲಿಯೂ ಅವರ ಕಾರ್ಯಕ್ರಮ ಪಸರಿಸಿತು. ಸ್ವಯಂಸೇವಿಕೆಯರನ್ನು ತಂಡತಂಡವಾಗಿ ಕಟ್ಟಿಕೊಂಡು ಹಳ್ಳಿಗಳನ್ನು ಸುತ್ತಿದರು. ರಾಜಕೀಯ ಪ್ರಚಾರ ಭಾಷಣಗಳು, ವಿದೇಶೀ ವಸ್ತ್ರ ಬಹಿಷ್ಕಾರ, ಮದ್ಯಪಾನ ನಿರೋಧ ಮುಂತಾದ ಕಾರ್ಯಕ್ರಮಗಳು ಹಳ್ಳಿಗಳಲ್ಲಿಯೂ ಪ್ರಾರಂಭವಾಯಿತು. ಒಂದು ಹಳ್ಳಿಯಲ್ಲಿ ಕಮಲಾ ಭಾಷಣ ಮಾಡುತ್ತಿದ್ದರು; ಒಬ್ಬ ಹಣ್ಣು ಹಣ್ಣು ಮುದುಕ ಆಕೆಯ ಭಾಷಣ ಕೇಳಿ, ಸಭೆ ಮುಗಿದ ಮೇಲೆ ಆಕೆಯ ಹತ್ತಿರ ಬಂದು ತಾನೂ ಖಾದಿಬಟ್ಟೆಯನ್ನು ತೊಡುವ ಮನಸ್ಸುಳ್ಳವನಾದರೂ ವಿದೇಶೀ ಬಟ್ಟೆ ಬಹಳ ಸುಲಭ ದರದಲ್ಲಿ ಸಿಕ್ಕುವುದರಿಂದ ಅದನ್ನು ನಿರ್ವಾಹ ವಿಲ್ಲದೆ ಕೊಂಡುಕೊಳ್ಳಬೇಕಾಗುತ್ತದೆಂದೂ, ಆ ಬಟ್ಟೆಯನ್ನು ಸುಟ್ಟು ಹಾಕಿದರೆ ತನಗೆ ಉಡಲು ಬೇರೊಂದು ಬಟ್ಟೆಯಿಲ್ಲವೆಂದೂ ತನ್ನ ಕಡು ದಾರಿದ್ರ್ಯವನ್ನು ತೋಡಿಕೊಂಡ. ತಕ್ಷಣ ಕಮಲಾ ಆ ರೈತನಿಗೆ ಕೆಲವು ಹಣ ಕೊಟ್ಟು ಖಾದಿ ಬಟ್ಟೆ ಕೊಂಡುಕೊಳ್ಳಲು ಸಹಾಯಮಾಡಿದರು.

ಇನ್ನೊಂದು ದಿನ, ದಿನದ ಚಳುವಳಿಯ ಕೆಲಸ ಮುಗಿಸಿಕೊಂಡು ಮನೆಗೆ ಬರುತ್ತಿದ್ದರು. ದಾರಿಯಲ್ಲಿ ಒಂದು ಅಂಗಡಿಯ ಮುಂದೆ ಒಬ್ಬಳು ಕಡು ಭಿಕಾರಿಣಿ ಹೆಂಗಸು ಕಂಕುಳಲ್ಲಿ ಮಗುವೊಂದನ್ನು ಕಟ್ಟಿಕೊಂಡು ಕೈಜೋಡಿಸಿ ತನ್ನ ಮಗುವಿನ ಆಹಾರಕ್ಕಾಗಿ ಭಿಕ್ಷೆ ಬೇಡುತ್ತಿದ್ದಳು. ತಕ್ಷಣ ಅಲ್ಲಿಯೇ ಕೆಲವು ಕಾಲ ಕಮಲಾ ನಿಂತು ದೃಶ್ಯವನ್ನು ನಿರೀಕ್ಷಿಸುತ್ತಿದ್ದರು. ಅಂಗಡಿಯವನು ಭಿಕಾರಿಣಿಯನ್ನು ಭಿಕ್ಷೆ ಕೊಡದೇನೇ ಹೊರದಬ್ಬಿದನು. ಕೂಡಲೇ ಕಮಲ ಆ ಭಿಕಾರಿಣಿಯನ್ನು ಕರೆದು ಮಗುವನ್ನು ಎತ್ತಿಕೊಂಡು

ಮುದ್ದಿಸಿ, ಆಕೆಯ ಕೈಯಲ್ಲಿ ಒಂದು ರೂಪಾಯನ್ನು ಕೊಟ್ಟು ಆ ಮಗುವಿಗೆ ಹಾಲು ಕೊಡಿಸೆಂದು ಹೇಳಿದರು. ಕಮಲಾ ತಾಯಿಯಾಗಿದ್ದವರು. ತಾಯಿಯ ಹೃದಯವನ್ನು ಅರಿತುಕೊಂಡರು.

ಕಮಲಾನೆಹರು ಪ್ರಯಾಗದಲ್ಲಿ ಒಂದು ಸಲ ೫೦,೦೦೦ ಜನ ಸಮೂಹದ ನಾಯಕಿಯಾಗಿ ಮೆರವಣಿಗೆಯನ್ನು ತೆಗೆದಿದ್ದರು. ಮೆರವಣಿಗೆ ಗಂಗಾನದಿಯ ವರೆಗೂ ಹೋಗಿ ಅಲ್ಲಿ ಚದುರುವುದಿತ್ತು. ಮೆರವಣಿಗೆ ಆಲ್ಬರ್ಟ್ ರಸ್ತೆಗೆ ಬರುವಷ್ಟರಲ್ಲಿ ಪೋಲೀಸರು ಬಂದು ಅದನ್ನು ತಡೆದರು. ಮೆರವಣಿಗೆಯೂ ಅಲ್ಲಿಯೇ ಕುಳಿತುಬಿಟ್ಟಿತು. ಅರ್ಧರಾತ್ರಿಯ ವರೆಗೂ ಕಮಲಾ ಮತ್ತು ಅವರ ಸಂಗಡಿಗರು ಚದುರಲೇ ಇಲ್ಲ. ಖಾಯಿಲೆಯಲ್ಲಿ ಮಲಗಿದ್ದ ಮೋತೀಲಾಲರಿಗೆ ಇದು ತಿಳಿಯಿತು. ಆರೋಗ್ಯದ ಕಡೆ ಲಕ್ಷ್ಯ ಮಾಡದೆ ಧಾವಿಸಿ ಬಂದು ಪೋಲೀಸರು ತಡೆಹಾಕಿದ್ದ ಸುತ್ತನ್ನು ಭೇದಿಸಿ ಕೊಂಡು ಮೆರವಣಿಗೆ ಸುಸೂತ್ರವಾಗಿ ಹೋಗಲು ಅನುವು ಮಾಡಿಕೊಟ್ಟರು.

ಸಂಯುಕ್ತ ಪ್ರಾಂತ್ಯದಲ್ಲಿ ಕರನಿರಾಕರಣ ಚಳುವಳಿ ಉಗ್ರರೂಪವನ್ನು ತಾಳಿತು. ಕಮಲಾನೆಹರು ಮತ್ತು ಆಕೆಯ ಸಂಗಡಿಗರ ಚಟುವಟಿಕೆ ಗಳನ್ನು ಸರ್ಕಾರ ಉದಾಸೀನ ಮಾಡಲು ತಯಾರಿರಲಿಲ್ಲ. ಹಳ್ಳಿಗರನ್ನು ಹೆದರಿಸಿ ಅವರನ್ನು ತಪ್ಪುದಾರಿಗೆ ತೆಗೆದುಕೊಂಡು ಹೋಗುತ್ತಿರುವರೆಂಬ ಆಪಾದನೆಯ ಮೇಲೆ ಸರ್ಕಾರ ಅವರನ್ನು ಬಂಧಿಸಿತು. ಪಂಡಿತ ಮದನ ಮೋಹನ ಮಾಳವೀಯರ ಜೊತೆಗೆ ಕಮಲಾನೆಹರು, ಕಾಂಗ್ರೆಸ್ ಕಾರ್ಯಕಾರಿ ಸಮಿತಿಯ ತಾತ್ಕಾಲಿಕ ಸದಸ್ಯರಾಗಿದ್ದರು. ೧೯೩೧ನೇ ಜನವರಿ ೧ನೇ ತಾರೀಖು ಕಮಲಾನೆಹರುರವರ ದಸ್ತಗಿರಿಯಾಯಿತು. ದಸ್ತಗಿರಿಯಾದಾಗ ವೃತ್ತಪತ್ರಿಕಾ ಪ್ರತಿನಿಧಿಗಳು ಆಕೆಯನ್ನು ಸಂದೇಶ ಕೊಡಲು ಕೇಳಿಕೊಳ್ಳಲು, ಆಕೆ ಹೀಗೆಂದರು :

" ನನ್ನ ಗಂಡ ಹಾಕಿಕೊಟ್ಟ ಪವಿತ್ರ ಮಾರ್ಗದಲ್ಲಿ ನಾನೂ ಹೋಗು ತ್ತಿರುವುದು ನನಗೆ ಸಂತೋಷದ ಮತ್ತು ಹೆಮ್ಮೆಯ ವಿಷಯವಾಗಿದೆ. ದೇಶ ಮತ್ತು ಜನ ಭಾರತದ ಸ್ವಾತಂತ್ರ್ಯಜ್ಯೋತಿಯನ್ನು ಆಚಂದ್ರಾರ್ಕವಾಗಿ ಬೆಳಗುವಂತೆ ಮಾಡುತ್ತಾರೆಂದು ನಂಬುತ್ತೇನೆ ".

ಕಮಲಾನೆಹರುರವರು ದಸ್ತಗಿರಿಯಾದ ಸುದ್ದಿ ಮೋತೀಲಾಲರನ್ನು ಕಂಗೆಡಿಸಿತು. ಕಲ್ಕತ್ತೆಯಲ್ಲಿ ವೈದ್ಯೋಪಚಾರ ತೆಗೆದುಕೊಳ್ಳುತ್ತಿದ್ದವರು ಅಲಹಾಬಾದಿಗೆ ಧಾವಿಸಿಬಂದರು.

ಮೋತೀಲಾಲರಿಗೆ ಬರಬರುತ್ತಾ ಕಾಯಿಲೆ ಜೋರಾಗುತ್ತಾ ಬಂದಿತು. ಕಾರ್ಯದ ಭಾರ, ಜವಾಬ್ದಾರಿಯೂ ಹೆಚ್ಚಾಗಿತ್ತು. ಹಿಂದಿನ ಸಮಯ ಗಳಲ್ಲಿ ಖಾಹಿಲೆಯನ್ನು ಜಯಪ್ರದವಾಗಿ ಹೊಡೆದಟ್ಟಿದ್ದರು. ಈ ಸಲವೂ ಹಾಗೆಯೇ ಆಗುತ್ತದೆಂದು ತಿಳಿದಿದ್ದರು. ಮೋತೀಲಾಲರ ಖಾಹಿಲೆಯ ನಿಮಿತ್ತ ಸ್ವಾತಂತ್ರ್ಯದಿನಾಚರಣೆಯ ದಿನ ಪಂಡಿತ ಜವಹರಲಾಲ್ ನೆಹರು, ರಣಜಿತ್ ಪಂಡಿತರ ಬಿಡುಗಡೆಯಾಯಿತು. ಗಾಂಧಿಜೀಯ ಬಿಡುಗಡೆಯೂ ಆಯಿತು. ಕಾರ್ಯಸಮಿತಿ, ಪರಿಸ್ಥಿತಿಯನ್ನು ಗಮನಿಸಿ ಬೇರೆಯ ನಿರ್ಧಾರ ತೆಗೆದುಕೊಳ್ಳಲೆಂದು ಸರ್ಕಾರದ ಅಭಿಪ್ರಾಯವಿತ್ತು. ತಾತ್ಕಾಲಿಕ ಕಾರ್ಯ ಸಮಿತಿಯ ಸದಸ್ಯರಾದ ಕಮಲಾನೆಹರು ಸಹ ಅಂದೇ ಬಿಡುಗಡೆಯಾದರು.

## ಸ್ಮರಣೆಯ ದಿನ

ಗಾಂಧಿಜೀ ಮತ್ತು ಇತರ ಕಾಂಗ್ರೆಸ್ ಕಾರ್ಯಕಾರಿ ಸಮಿತಿಯ ಸದಸ್ಯರ ದಸ್ತಗಿರಿಯಾದನಂತರ ಪಂಡಿತ್ ಮೋತೀಲಾಲರು ಚಳುವಳಿಯ ನಾಯಕತ್ವ ವಹಿಸಿಕೊಂಡಿದ್ದರು. ಉರಿಬಿಸಿಲಿನಲ್ಲಿ ಹೆಣ್ಣುಮಕ್ಕಳು ಬೆಂದು ಚಳುವಳಿಯ ಬಿಸಿಗಾಳಿಯಲ್ಲಿ ಬಾಡುತ್ತಿದ್ದುದು ಮೃದುಹೃದಯದವರಾದ ಮೋತೀಲಾಲರಿಗೆ ಸರಿಬೀಳಲಿಲ್ಲ. ಆದರೆ ದೇಶದ ನಾಡಿಯನ್ನು ತಿಳಿದ ಮೋತೀಲಾಲರು ಅವರನ್ನು ಧೈರ್ಯಗುಂದಿಸಲಿಲ್ಲ. ಅವರ ಹೆಂಡತಿ ಸ್ವರೂಪರಾಣಿ, ಮಗಳು ಹಾಗೂ ಸೊಸೆ ಅವರೇ ಪ್ರತ್ಯಕ್ಷ ಭಾಗವಹಿಸಿದ್ದರು. ಅದರಲ್ಲೂ ಕಮಲಾರವರ ಕಾರ್ಯಶಕ್ತಿಯನ್ನು ನೋಡಿ ಮೆಚ್ಚಿದ್ದರು.

ಭಾರತದಲ್ಲೆಲ್ಲಾ ೧೯೩೧ನೇ ಜನವರಿ ೨೬ನೇ ತಾರೀಖು ಮೋತೀ ಲಾಲರ ಆಜ್ಞೆಯಂತೆ 'ಸ್ಮರಣೆಯ ದಿನ'ವನ್ನಾಗಿ ಆಚರಿಸಾಲಾಯಿತು.

ಸರ್ಕಾರ, ಈ ಸಭೆಗಳನ್ನು ನ್ಯಾಯಬಾಹಿರವೆಂದು ಸಾರಿತು. ಪೋಲೀಸರು ಅಲ್ಲಲ್ಲಿ ಲಾಠಿ ಏಟಿನಿಂದ ಸಭೆಗಳನ್ನು ಚದುರಿಸಿದರು. ಮೋತೀಲಾಲರು ಹಾಸಿಗೆ ಹಿಡಿದು ಮಲಗಿದ್ದರೂ ಅಲ್ಲಿಂದಲೇ ಈ 'ಸ್ಮರಣೆಯ ದಿನ'ದ ವ್ಯವಸ್ಥೆಯನ್ನು ಮಾಡಿದ್ದರು. ತಂತಿ, ಟೆಲಿಫೋನಾಗಲಿ, ಪತ್ರ ಅಥವಾ ವರ್ತಮಾನ ಪತ್ರಗಳ ಮುಖಾಂತರವಾಗಲೀ ಇದನ್ನು ತಿಳಿಸುವಂತಿರಲಿಲ್ಲ. ಆದರೂ ಹೇಗೋ ಭಾರತದ ಮೂಲೆ ಮೂಲೆಗಳಲ್ಲೆಲ್ಲಾ ಈ ದಿನಾಚರಣೆಯನ್ನಾಚರಿಸಲಾಯಿತು. ಈ ಸ್ಮರಣೆಯ ದಿನ ಮಂಡಿತವಾದ ನಿರ್ಣಯದಲ್ಲಿ ಭಾರತದ ಮಹಿಳೆಯರು ದೇಶಕ್ಕಾಗಿ ಶ್ರಮಿಸಿ ಬಲಿದಾನ ಮಾಡಿದ ವಿಷಯದಲ್ಲಿ ಮೆಚ್ಚಿಗೆಯನ್ನು ತೋರಿಸಲಾಗಿತ್ತು.

ಮೋತೀಲಾಲರಿಗೆ ಖಾಹಿಲೆ ಜೋರಾಗುತ್ತ ಬಂದಿತು. ಜವಹರ್, ಕಮಲಾ, ವಿಜಯಲಕ್ಷ್ಮಿ, ರಣಜಿತ್, ಕೃಷ್ಣಾ, ಸ್ವರೂಪರಾಣಿ ಇವರೆಲ್ಲರೂ ಸರದಿಪ್ರಕಾರ ಮೋತೀಲಾಲರ ಶುಶ್ರೂಷೆಗೈಯಲಾರಂಭಿಸಿದರು. ಗಾಂಧಿಜೀಯರವಾಡ ಸೆರೆಮನೆಯಿಂದ ಬಿಡುಗಡೆಯಾದ ಕೂಡಲೇ ಚಿಂತಾಜನಕ ಸ್ಥಿತಿಯಲ್ಲಿದ್ದ ಮೋತೀಲಾಲರನ್ನು ನೋಡಲು ಅಲಹಾಬಾದಿಗೆ ಬಂದರು. ಡಾ| ಅನ್ಸಾರಿ, ಡಾ| ಜೀವರಾಜ ಮೆಹ್ತ, ಡಾ| ಬಿಧನಚಂದ್ರ ರಾಯ್, ಮೋತೀಲಾಲರನ್ನು ಪರೀಕ್ಷಿಸಿ, ಲಕ್ನೋಗೆ ಎಕ್ಸ್‌ರೆ ಪರೀಕ್ಷೆಗಾಗಿ ಕರೆದುಕೊಂಡು ಹೋಗಬೇಕೆಂದು ಸಲಹೆಯಿತ್ತರು. ಜವಹರ್, ಸ್ವರೂಪರಾಣಿ ಮೋತೀಲಾಲರನ್ನು ಕಾರಿನಲ್ಲಿ ಕರೆದುಕೊಂಡು ಹೋದರು. ರೋಗವು ಉಲ್ಬಣವಾಯಿತು. ಫೆಬ್ರುವರಿ ೬ನೇ ತಾರೀಖು ಮೋತೀಲಾಲರು ಆನಂದ ಭವನವನ್ನು ದುಃಖಸಮುದ್ರದಲ್ಲಿ ಮುಳುಗಿಸಿ ಅನಂತವಾಗಿ ಅಗಲಿಬಿಟ್ಟರು.

ದುಃಖಶಮನಮಾಡಿಕೊಳ್ಳಲು, ಪಂಡಿತ ಜವಹರಲಾಲರು ಕಮಲಾ ಮತ್ತು ಇಂದಿರೆಯರೊಂದಿಗೆ ಸಿಂಹಳ ದ್ವೀಪಕ್ಕೆ ಪ್ರಯಾಣ ಬೆಳೆಸಿದರು. ಅಲ್ಲಿ ಕೆಲವು ವಾರಗಳನ್ನು ಕಳೆದು ಪುನಃ ಅಲಹಾಬಾದಿಗೆ ಹಿಂದಿರುಗಿದರು. ಸಿಂಹಳದ ಜನರು ಜವಹರ ದಂಪತಿಗಳಿಗೆ ಅದ್ಭುತವಾದ ಸ್ವಾಗತವಿತ್ತರು. ಅದು ಭಾರತದ ಸ್ವಾತಂತ್ರ್ಯಯುದ್ಧದ ಯೋಧರಿಗೆ ಕೊಡುವ ಸನ್ಮಾನದ ಪ್ರತೀಕವಾಗಿತ್ತು.

ಸಿಂಹಳದ್ವೀಪದಿಂದ ಕಮಲಾ ಮತ್ತು ಜವಹರಲಾಲರು ದಕ್ಷಿಣ ಭಾರತದ ಪ್ರವಾಸ ಕೈಗೊಂಡು, ತಿರುವಾಂಕೂರು, ಕೊಚಿನ್, ಮಲಬಾರ್, ಮೈಸೂರು, ಹೈದರಾಬಾಡ್ ಮುಂತಾದ ಸಂಸ್ಥಾನಗಳಿಗೆ ಭೇಟಿ ಕೊಟ್ಟರು. ಆಗಲೇ ಕಮಲಾನೆಹರು ಕೂಡ ಮೈಸೂರಿಗೆ ಬಂದುದು.

ಕಮಲಾನೆಹರು ಮತ್ತು ಜವಹರಲಾಲರು ಹೈದರಾಬಾದಿಗೆ ಶ್ರೀಮತಿ ಸರೋಜಿನಿ ನಾಯ್ಡುರವರನ್ನು ಭೇಟಿಯಾಗಲು ಹೋಗಿದ್ದರು. ಹೈದರಾಬಾದಿನ ಗಣ್ಯ ಮಹಿಳೆಯರು ಒಂದು ಸಣ್ಣ ಸಭೆ ಸೇರಿಸಿ ಕಮಲಾರವರನ್ನು ಸನ್ಮಾನಿಸಿದರು. ಆ ಸಭೆಯಲ್ಲಿ ಕಮಲಾ ಭಾಷಣ ಮಾಡಿದರು. ಆ ಭಾಷಣದಲ್ಲಿ ಮಹನೀಯರ ಮೇಲೆ ಮಹಿಳೆಯರು ಹೂಡಿದ ಚಳುವಳಿಯನ್ನು ಚರ್ಚಿಸುತ್ತ, ಗಂಡಸಿಗೆ ಯಾವಾಗಲೂ ಹೆದರಿ ನಡೆದುಕೊಳ್ಳದೆ, ಅವರು ಹೇಳಿದ್ದಕ್ಕೆ ಹೂಗುಟ್ಟಬಾರದೆಂದು ಉಪದೇಶಿಸಿದರು. ಇದಾದ ಮೂರು ವಾರಗಳ ಮೇಲೆ ಒಂದು ಚಮತ್ಕಾರ ನಡೆಯಿತು. ಹೈದರಾಬಾದಿನ ಗಣ್ಯನೊಬ್ಬ ಕಮಲಾಗೆ ಒಂದು ಕಾಗದ ಬರೆದಿದ್ದ. ಅದರಲ್ಲಿ ಕಮಲಾನೆಹರು ಬಂದು ಹೋದಂದಿನಿಂದ ಆತನ ಹೆಂಡತಿಯ ನಡವಳಿಕೆ ಮಾರ್ಪಾಡು ಆಗಿರುವುದಾಗಿಯೂ, ತಾನು ಹೇಳಿದುದಕ್ಕೆ ಪ್ರತಿವಾದಿಸುತ್ತ, ತಾನಾಡಿದ ಮಾತನ್ನು ಕೇಳುತ್ತಲೇ ಇಲ್ಲವೆಂದೂ, ಜೋರುಮಾಡಿದರೆ ವಿರುದ್ಧ ತನ್ನ ಮನಸ್ಸಿಗೆ ಬಂದಂತೆ ಮಾಡುತ್ತಾಳೆಂದೂ ಬರೆದಿದ್ದರು. ಕಮಲಾ ವಿಜಯಿಯಾದೆನೆಂದು ಜವಹರರನ್ನು ಜ್ಞಾಪಿಸಿರಬಹುದೇ?

## ಪುನಃ ಕಾಹಿಲೆ

ಗಾಂಧಿ-ಇರ್ವಿನ್ ಒಪ್ಪಂದವಾದ ಮೇಲೆ ಮಹಾತ್ಮ ಗಾಂಧಿ ಅಖಿಲ ಭಾರತ ಕಾಂಗ್ರೆಸ್ಸಿನ ಏಕಮಾತ್ರ ಪ್ರತಿನಿಧಿಯಾಗಿ ದುಂಡುಮೇಜಿನ ಪರಿಷತ್ತಿಗೆ ಲಂಡನ್ನಿಗೆ ಪ್ರಯಾಣಮಾಡಿದರು. ಚಕ್ರಗೋಷ್ಠಿಯ ನಾಟಕ ಲಂಡನ್ನಿನಲ್ಲಿ ಪ್ರದರ್ಶಿಸಲ್ಪಟ್ಟಿತು. ಗಾಂಧಿಜೀ ನಿರಾಶರಾಗಿ ಭಾರತಕ್ಕೆ ಬರಿಗೈಯಲ್ಲಿ

ಪ್ರಯಾಣ ಮಾಡಿದರು. ಅವರು ಭಾರತಕ್ಕೆ ಬರುವಷ್ಟರಲ್ಲಿ ಭಾರತ ಸರ್ಕಾರ ಕರಾಳ ಶಾಸನಗಳನ್ನು ಪ್ರಯೋಗಿಸಿ ಮುಖಂಡರನ್ನೆಲ್ಲಾ ದಸ್ತಗಿರಿ ಮಾಡುತ್ತಿತ್ತು.

ಕಮಲಾನೆಹರು ಆಗ ಹಾಸಿಗೆ ಹಿಡಿದಿದ್ದರು. ಜವಹರಲಾಲರು ರಾಜಕೀಯದ ತುಂಬು ಕೆಲಸದಲ್ಲಿದ್ದರು. ಸಂಯುಕ್ತ ಪ್ರಾಂತ್ಯದಲ್ಲಿ ರೈತರ ಚಳುವಳಿ ಜೋರಿನಿಂದ ಸಾಗಿತ್ತು. ರೈತರೆಲ್ಲಾ ಎಚ್ಚೆತ್ತಿದ್ದರು. ಅಲಹಾಬಾದಿನ ರೈತ ಪರಿಷತ್ತನ್ನು ಮುಗಿಸಿಕೊಂಡು ಜವಹರಲಾಲರು ಕಮಲಾರವರನ್ನು ಕರೆದುಕೊಂಡು ಬೊಂಬಾಯಿಗೆ ಬಂದರು. ಅಲ್ಲಿ ಆಕೆಯ ಚಿಕಿತ್ಸೆಯ ಏರ್ಪಾಡು ಮಾಡಿ ಬಹಳ ದಿನಗಳಿಂದ ಕೊಟ್ಟಿದ್ದ ಮಾತನ್ನು ಉಳಿಸಿಕೊಳ್ಳಲು ಕರ್ನಾಟಕದ ಪ್ರವಾಸ ಕೈಗೊಂಡರು.

ಸೇನಾಪತಿ ಡಾ| ಹರ್ಡೀಕರರು ಅಖಿಲ ಭಾರತಕ್ಕೆ ಹಿಂದೂಸ್ಥಾನಿ ಸೇವಾದಲದ ಮೂಲಕ ಮಾಡಿದ ಸೇವೆ ಅಮೋಘವಾದುದು. ಹಾಗೆಯೇ ಮರೆಯಲಾರದುದು. ಪಂಡಿತ ಜವಹರಲಾಲರು ಈ ಸಂಸ್ಥೆಯ ಅಗತ್ಯತೆಯನ್ನು ಕಂಡುಕೊಂಡು ಸೇವಾದಳವನ್ನು ಅಖಿಲ ಭಾರತ ಕಾಂಗ್ರೆಸ್ಸಿನ ಅಂಗಸಂಸ್ಥೆಯನ್ನಾಗಿ ಮಾಡಿದರು. ಡಾ| ಹರ್ಡೀಕರ್ ಮತ್ತು ಜವಹರಲಾಲರು ಇದರ ಸಂಚಾಲಕರಾಗಿದ್ದರು. ಈ ಸಂಸ್ಥೆಯ ಕೇಂದ್ರ ಕಚೇರಿ ಹುಬ್ಬಳ್ಳಿಯಲ್ಲಿತ್ತು. ಹರ್ಡೀಕರರ ಒತ್ತಾಯದಿಂದ ಪಂಡಿತರು ಕರ್ನಾಟಕ ಪ್ರವಾಸ ಹೊರಟಿದ್ದರು. ಕರ್ನಾಟಕದ ಜನ ಕೊಟ್ಟ ಸ್ವಾಗತ ನೆಹರು ಹಿಂದೆಂದೂ ಕಂಡಿರಲಿಲ್ಲ. ಸಂಯುಕ್ತ ಪ್ರಾಂತ್ಯದಲ್ಲಿ ಪ್ರಾರಂಭವಾಗಲಿರುವ ರೈತರ ಚಳುವಳಿ, ಕಮಲಾನೆಹರು ಖಾಹಿಲೆ ಜವಹರರನ್ನು ಬೇಗನೆ ಬೊಂಬಾಯಿಗೆ ಕರೆಸಿಕೊಂಡಿತು. ಗಾಂಧಿಜೀ ಲಂಡನ್ನಿನಿಂದ ಬರುವುದಕ್ಕೆ ೬ ದಿನಗಳು ಉಳಿದಿತ್ತು. ಸಂಯುಕ್ತ ಪ್ರಾಂತ್ಯದ ಸುದ್ದಿ ಪಂಡಿತರನ್ನು ರೇಗಿಸಿತ್ತು. ತನ್ನ ಪ್ರಾಂತ್ಯ ಕಷ್ಟದಲ್ಲಿರುವಾಗ ಅವರಲ್ಲಿ ಕೂಡಿಕೊಳ್ಳುವ ಆಸೆಯಿಂದ ಗಾಂಧಿಜೀ ಬರವಿಗಾಗಿ ಕಾಯದೆ ಅಲಹಾಬಾದಿಗೆ ತೆರಳಿದರು. ಹೋಗುವಾಗ ಸಂಗಾತಿ ಕಮಲಾನ್ನ ಖಾಹಿಲೆಯಲ್ಲಿ ಬಿಟ್ಟು, ಪುನಃ ಸ್ವತಂತ್ರರಾಗಿದ್ದರೆ ೬ ದಿನಗಳ ಮೇಲೆ ಬೊಂಬಾಯಿಗೆ ಗಾಂಧಿಜೀ ಬಂದಾಗ ಕಾರ್ಯ

ಸಮಿತಿಯಲ್ಲಿ ಬಂದು ಭಾಗವಹಿಸುವ ಸಮಯದಲ್ಲಿ ಬಂದು ಕಮಲಾರವರನ್ನು ನೋಡಬಹುದೆಂದು ತೀರ್ಮಾನಿಸಿ ಅಲಹಾಬಾದಿಗೆ ತೆರಳಿದರು.

ಅಲಹಾಬಾದಿಗೆ ಬಂದ ಕೂಡಲೇ ನಗರವನ್ನು ಬಿಟ್ಟು ಹೋಗ ಕೂಡದೆಂಬ ಆಜ್ಞೆಯು ಜಾರಿಯಾಯಿತು. ಅಲಹಾಬಾದ್ ನಗರವನ್ನು ಬಿಟ್ಟು ಹೋಗಕೂಡದೆಂದು ಹಾಕಿದ್ದ ಆ ಪ್ರತಿಬಂಧಕಾಜ್ಞೆಯನ್ನು ಮುರಿದು ಜವಹರರು ಬೊಂಬಾಯಿಗೆ ಗಾಂಧಿಜೀಯನ್ನು, ಕಮಲಾರನ್ನು ನೋಡಲು ಪ್ರಯಾಣ ಬೆಳೆಸಿದರು. ಮಧ್ಯ ದಾರಿಯಲ್ಲಿ ನೆಹರುರವರನ್ನು ದಸ್ತಗಿರಿ ಮಾಡಲಾಯಿತು. ಇತ್ತ ಜವಹರರು ಪುನಃ ಸೆರೆಮನೆ ಸೇರಿದರು. ಅತ್ತ ಕಮಲಾನೆಹರು ಆಸ್ಪತ್ರೆ ಸೇರಿದರು. ಕಮಲಾಂವರನ್ನು ಜವಹರಲಾಲರು ನೋಡಲಾಗಲೇ ಇಲ್ಲ.

ಕಾಂಗ್ರೆಸ್ ಸಂಸ್ಥೆಯು ನ್ಯಾಯಬಾಹಿರವಾದ ಸಂಸ್ಥೆಯೆಂದು ಸಾರ ಲಾಯಿತು. ಕಾರ್ಯಸಮಿತಿ, ಪ್ರಾಂತಸಮಿತಿ ಮತ್ತು ಇತರ ಕಾಂಗ್ರೆಸ್ ಸಂಸ್ಥೆಗಳು ಬಹಿಷ್ಕರಿಸಲ್ಪಟ್ಟವು. ರಾಷ್ಟ್ರೀಯ ಶಾಲೆಗಳು, ಆಸ್ಪತ್ರೆಗಳು, ರೈತರ ಸಂಘಗಳು, ಯುವಕರ ಸಂಘಗಳು ರಾಷ್ಟ್ರಪ್ರೇಮದ ಅಪರಾಧಕ್ಕಾಗಿ ನ್ಯಾಯಬಾಹಿರವಾದುವು. ದಬ್ಬಾಳಿಕೆ ತನ್ನ ರಾಕ್ಷಸೀ ನಾಲಿಗೆಯನ್ನು ಚಾಚಿ ಎಲ್ಲಾ ಮುಖಗಳಲ್ಲಿಯೂ ಹರಡಿಕೊಂಡಿತು. ಲಕ್ಷಾಂತರ ಮಂದಿ ಸೆರೆಮನೆ ಸೇರಿದರು. ಸೆರೆಮನೆಗಳೆಲ್ಲ ಭರ್ತಿಯಾಗಿ ಬೇರೆ ಬೇರೆ ನಿವಾಸ ಗಳನ್ನು ಸೆರೆಮನೆಗಳಾಗಿ ಮಾರ್ಪಾಡು ಮಾಡಿದರು. ಈ ಚಳುವಳಿಯಲ್ಲಿ ಜವಹರರ ತಾಯಿ, ಸಹೋದರಿಯರು ಭಾಗ ತೆಗೆದುಕೊಂಡರು. ಕಮಲಾ ಹಾಸಿಗೆ ಹಿಡಿದಿದ್ದರಿಂದ ಭಾಗ ತೆಗೆದು ಕೊಳ್ಳಲಾಗಲಿಲ್ಲ. ಹಾಸಿಗೆಯಿಂದಲೇ ಅಲಹಾಬಾದಿನ ಘಟನೆಗಳನ್ನು ತಿಳಿದುಕೊಳ್ಳುತ್ತಿದ್ದರು,

ಜವಹರರ ತಾಯಿ ಸ್ವರೂಪರಾಣಿಗೆ ವೃದ್ಧಾಪ್ಯದಲ್ಲಿ ಸೆರೆಮನೆಯ ವಾಸ ಹಿಡಿಸಲಿಲ್ಲ. ಒಂದು ವರ್ಷದ ಕಾರಾಗೃಹದ ಜೀವನವು ಅವರ ದೇಹಸ್ಥಿತಿಯನ್ನು ಕೆಡಿಸಿತು. ಅವರು ಖಾಹಿಲೆಯ ನಿಮಿತ್ತದಿಂದ ಬಿಡುಗಡೆ ಮಾಡಲ್ಪಟ್ಟರು. ನಂತರ ಚಿಕಿತ್ಸೆಯು ಲಕ್ನೋದಲ್ಲಿ ಪ್ರಾರಂಭವಾಯಿತು.

ಅಲ್ಲಿಯೂ ಗುಣಮುಖದ ಚಿಹ್ನೆಗಳು ಕಂಡುಬರಲಿಲ್ಲ. ಆದಕಾರಣ ಮಗ ಜವಹರರನ್ನು ೧೯೩೩ನೇ ಆಗಸ್ಟ್ ೩೦ನೇ ತಾರೀಖು ಬಿಡುಗಡೆಮಾಡಿದರು. ತಾಯ ಆರೈಕೆ ಮಾಡಲು ನೆಹರು ತಮ್ಮ ರಾಜಕೀಯ ಕೊಂಚ ಬದಿಗಿಟ್ಟು ಶ್ರಮಿಸಿದರು. ಕೃಷ್ಣಾರವರ ಮದುವೆಗೋಸ್ಕರ ಲಕ್ನೋ ಆಸ್ಪತ್ರೆಯಿಂದ ಬಿಡುಗಡೆಯಾಗಿ ಮನೆಗೆ ಬಂದರು. ಕಮಲಾ ತನ್ನ ಸ್ವಂತ ಖಾಹಿಲೆಯನ್ನೂ ಲೆಕ್ಕಿಸದೆ, ಗಂಡನೊಂದಿಗೆ ಅತ್ತೆಯ ಆರೈಕೆ ಮಾಡುತ್ತಿದ್ದರು.

ಕಮಲಾರವರ ಮನಸ್ಸಿನ ದಾರ್ಢ್ಯ ಬೆಳೆಯುತ್ತ ಹೋದಂತೆ ಅವರ ದೇಹದಾರ್ಢ್ಯ ಕುಗ್ಗುತ್ತಾ ಹೋಯಿತು. ತಮ್ಮ ನೋವನ್ನು ತಾವೇ ನುಂಗಿ ಕೊಳ್ಳುತ್ತಿದ್ದರೇ ವಿನಾ ಯಾರಿಗೂ ಅದರ ಅರಿವನ್ನುಂಟುಮಾಡುತ್ತಿರಲಿಲ್ಲ. ಆದ್ದರಿಂದ ಅವರ ದೇಹಸ್ಥಿತಿಯ ಕೆಡುವಿಕೆಯಲ್ಲಿ ಯಾರೂ ಅಷ್ಟಾಗಿ ಗಮನ ಕೊಡಲಿಲ್ಲ. ರಾಜಕೀಯ ಕೆಲಸದ ಮಧ್ಯೆ ಇರುವಾಗ ವೈದ್ಯರ ಸಲಹೆಯನ್ನು ಉಪೇಕ್ಷಿಸಿ, ತನ್ನ ಆರೋಗ್ಯದ ಕಡೆಗೆ ಗಮನವನ್ನೇ ಕೊಡದೆ, ಕೆಲಸದಲ್ಲಿ ಮಗ್ನರಾಗಿದ್ದರು.

ಜವಹರರ ಬಿಡುಗಡೆಯ ನಂತರ ಹೆಚ್ಚು ಕಾಲ ಅಲಹಾಬಾದಿನಲ್ಲಿಯೇ ಕಳೆದರು. ರಾಜಕೀಯದ ಜೊತೆಗೆ ಮನೆಯ ಸಂಸಾರದ ಭಾರವೂ ಅವರ ಮೇಲೆಯೇ ಬಿತ್ತು. ಖರ್ಚು ಹೆಚ್ಚಾಗಿ ದುಡಿಮೆಯು ಕಡಿಮೆಯಾಗಿತ್ತು. ಆದರೂ ತಾಯಿಯ ಕೊನೆಗಾಲದಲ್ಲಿ ಆಕೆಯ ಯಾವ ಸೌಲಭ್ಯಗಳನ್ನೂ ಕಡಿಮೆ ಮಾಡಲಿಲ್ಲ.

ಹಣಕಾಸಿನ ಪರಿಸ್ಥಿತಿಯನ್ನು ಹತೋಟಿಯಲ್ಲಿ ತರಲು ಜವಹರರು ತಮ್ಮ ಹೆಂಡತಿ ಕಮಲಾನೆಹರುರವರ ಒಡವೆಗಳನ್ನು ಮಾರುವುದಾಗಿ ನಿರ್ಧರಿಸಿದರು. ಕಮಲಾ ಈ ಆಭರಣಗಳನ್ನು ಮಾರಲು ಒಪ್ಪಲಿಲ್ಲ. ಆಕೆ ಈ ಆಭರಣಗಳನ್ನು ತೊಟ್ಟುಕೊಳ್ಳುತ್ತಿರಲಿಲ್ಲವಾದರೂ, ತನ್ನ ಮಗಳು ಇಂದಿರೆಗೆ ಕೊಡಲು ಆಸೆ ಇಟ್ಟುಕೊಂಡಿದ್ದರು.

ಜವಹರಲಾಲರಿಗೆ ಬಂಗಾಳದ ಕರೆ ಬಹಳ ದಿನಗಳಿಂದಲೂ ಇತ್ತು. ಸೆರೆಮನೆಯ ಕರೆಯೂ ಹತ್ತಿರ ಬಂದಂತೆ ತೋರುತ್ತಿತ್ತು. ಆದುದರಿಂದ

ಬಂಗಾಳಕ್ಕೆ ಹೋಗಿ ಜೊತೆಗೆ ಕಮಲಾರವರ ದೇಹಪರೀಕ್ಷೆ ಕಲ್ಕತ್ತೆಯಲ್ಲಿ ಮಾಡಿಸಿ, ಚಿಕಿತ್ಸೆಯ ಏರ್ಪಾಡು ಮಾಡಲು ನಿರ್ಧರಿಸಿದರು. ಅಲಹಾಬಾದಿನಲ್ಲಿ ಸ್ವಾತಂತ್ರ್ಯದಿನಾಚರಣೆಯು ಹೊತ್ತಿಗೆ ಸರಿಯಾಗಿ ಬರಲು, ಕಮಲಾರವರ ಜೊತೆಗೆ ಜನವರಿ ೧೫ನೇ ತಾರೀಖು ಕಲ್ಕತ್ತೆಗೆ ಪ್ರಯಾಣ ಮಾಡಿದರು.

ಆ ಸಂಜೆಯೇ ಬಿಹಾರದಲ್ಲಿ ಭೂಕಂಪವಾದದ್ದು. ಬಿಹಾರದ ದಕ್ಷಿಣ ಭಾಗದಲ್ಲಿ ಭೂಕಂಪವಾದ ಪ್ರದೇಶದಲ್ಲೇ ಇವರ ರೈಲುಗಾಡಿ ಓಡುತ್ತಿತ್ತು. ಕಲ್ಕತ್ತೆಗೆ ಬಂದ ತಕ್ಷಣವೇ ಕಮಲಾರವರನ್ನು ಅನೇಕ ವೈದ್ಯರು ಪರೀಕ್ಷೆ ಮಾಡಿದರು. ಒಂದು ತಿಂಗಳ ನಂತರ ಪುನಃ ಬಂದು ಚಿಕಿತ್ಸೆ ಪ್ರಾರಂಭ ಮಾಡಬೇಕೆಂದು ತೀರ್ಮಾನವಾಯಿತು. ಜವಹರರು ನಂತರ ಸ್ನೇಹಿತರು, ಕೆಲಸಗಾರರು ಮುಂತಾದ ಪ್ರಮುಖರನ್ನು ಭೇಟಿ ಮಾಡಿ ಕಲ್ಕತ್ತೆಯಲ್ಲಿ ಸಾರ್ವಜನಿಕ ಸಭೆಗಳಲ್ಲಿ ಭಾಷಣ ಮಾಡಿದರು.

## ಶಾಂತಿನಿಕೇತನಕ್ಕೆ ಭೇಟಿ

ಕಮಲಾ ಮತ್ತು ಜವಹರರು, ಕಲ್ಕತ್ತೆಯಿಂದ ಶಾಂತಿನಿಕೇತನಕ್ಕೆ ಪ್ರಯಾಣ ಬೆಳೆಸಿದರು. ಕವಿವರ್ಯರಾದ ರವೀಂದ್ರನಾಥ ಟಾಗೂರರನ್ನು ನೋಡುವುದೂ ಮತ್ತು ತಮ್ಮ ಮಗಳು ಇಂದಿರೆಯ ಮುಂದಿನ ವಿದ್ಯಾಭ್ಯಾಸ ಅಲ್ಲಿಯೇ ಆಗಬೇಕಿತ್ತಾದ್ದರಿಂದ ಸ್ಥಳ ನೋಡಿಕೊಂಡು ಹೋಗುವುದೂ ಅವರ ಭೇಟಿಯ ಉದ್ದೇಶವಾಗಿತ್ತು. ಇಂದಿರೆಯನ್ನು ಶಾಂತಿನಿಕೇತನಕ್ಕೆ ಕಳುಹಿಸಲು ನಿರ್ಧರಿಸಿ, ಬಿಹಾರದ ಮಾರ್ಗವಾಗಿ ಪ್ರಯಾಣ ಬೆಳೆಯಿಸಿ ಪಾಟ್ನಾ ನಗರದಲ್ಲಿ ಬಾಬು ರಾಜೇಂದ್ರ ಪ್ರಸಾದರನ್ನು ನೋಡಲು ಅಲ್ಲಿ ಇಳಿದರು. ರಾಜೇಂದ್ರ ಬಾಬುವನ್ನು ಸರ್ಕಾರ ಆಗತಾನೇ ಭೂಕಂಪದ ಪರಿಹಾರಕ್ಕೋಸ್ಕರ ಬಿಡುಗಡೆ ಮಾಡಿತ್ತು; ಕಮಲಾ ತಮ್ಮ ಅಣ್ಣನ

ಮನೆಯಲ್ಲಿ ತಂಗಲು ಹೋದಾಗ ಆ ಮನೆ ಸಂಪೂರ್ಣವಾಗಿ ನೆಲಸಮವಾಗಿ ಭೂಕಂಪಕ್ಕೆ ಆಹುತಿಯಾಗಿತ್ತು.

ಕಮಲಾ ಮತ್ತು ಜವಹರರು ಫೆಬ್ರುವರಿ ೧೧ಕ್ಕೆ ಅಲಹಾಬಾದಿಗೆ ಬಂದರು. ಹತ್ತು ದಿನಗಳ ಪ್ರವಾಸ ತುಂಬಾ ಶ್ರಮದಾಯಕವಾಗಿತ್ತು. ಮರುದಿನ ಮಧ್ಯಾಹ್ನ ಕಮಲಾ, ಜವಹರಲಾಲ್, ಪುರುಷೋತ್ತಮದಾಸ್ ತಾಂಡನ್ ಮಾತನಾಡುತ್ತ ಕುಳಿತಿದ್ದರು. ಪೋಲೀಸರ ಕಾರೊಂದು ಮನೆಗೆ ಬಂದಿತು. ಕಲ್ಕತ್ತೆಯಲ್ಲಿ ಭಾಷಣ ಮಾಡಿದುದು ರಾಜದ್ರೋಹವೆಂದು ಪರಿಗಣಿಸಿ, ಅಲ್ಲಿಂದ ಬಂದಿತ್ತು ದಸ್ತಗಿರಿ ವಾರಂಟ್. ನೆಹರು, 'ಇದಕ್ಕಾಗಿ ಬಹಳ ದಿನಗಳಿಂದ ಕಾಯುತ್ತಿದ್ದೆ' ಎಂದು ಹಾಸ್ಯ ಮಾಡುತ್ತ ಸೆರೆಮನೆಗೆ ಹೋಗುವ ಸಿದ್ಧತೆಯಲ್ಲಿ ತೊಡಗಿದ್ದರು. ಕಮಲಾ ಜವಹರರ ಬಟ್ಟೆಬರೆ ಸಿದ್ಧಮಾಡಲು ತಮ್ಮ ಕೊಠಡಿಗೆ ಹೋದರು. ಜವಹರರು ಆಕೆಯನ್ನು ಹಿಂಬಾಲಿಸಿದರು. ತೇಜಸ್ವಿಯಾದ ಜವಹರರನ್ನು ಕಾಂತಿಯುಕ್ತವಾದ ಕಣ್ಣುಗಳಿಂದ ನೋಡಿದರು ಕಮಲಾ. ಕ್ಷಣದಲ್ಲಿಯೇ ಜವಹರಲಾಲರ ಕೊರಳನ್ನು ಹಿಡಿದುಕೊಂಡು ಬಿಗಿದಪ್ಪಿದರು; ಮೂರ್ಛೆಹೊಂದಿ ಕೆಳಗೆ ಬಿದ್ದರು. ಜವಹರರು ಸೆರೆಮನೆಗೆ ಹೋಗುವುದು ಅದೇ ಮೊದಲನೇ ಸಾರೆ ಅಲ್ಲದಿದ್ದರೂ ಕಮಲಾರವರ ಆ ಹೃದಯದ ಹಂಬಲ ಕೊನೆಯದಾಯಿತು. ಅದೇ ಕೊನೆಯ ಸಾರಿಯ ಆತ್ಮೀಯತೆಯ ಭೇಟಿಯಾಯಿತು. ಕಮಲಾ ಮತ್ತು ಜವಹರರು ಆಗತಾನೇ ಹತ್ತಿರಕ್ಕೆ ಬಂದಿದ್ದರು; ಒಬ್ಬರನ್ನೊಬ್ಬರು ಅರಿತುಕೊಂಡಿದ್ದರು; ಆಗ ಒಬ್ಬರಿಗೊಬ್ಬರು ಬೇಕಾಗಿದ್ದರು. ಖಾಹಿಲೆಯ ಸಮಯದಲ್ಲಂತೂ, ತನ್ನವರೆಂಬುವರು ಇರಲೇಬೇಕು. ಆ ಸಮಯದಲ್ಲಿ ವಿಧಿಯು ಅವರಿಬ್ಬರನ್ನೂ ಬೇರೆಮಾಡಿತು.

ಜವಹರರ ವಿಚಾರಣೆ ಕಲ್ಕತ್ತೆಯಲ್ಲಾಗಿ ಎರಡು ವರ್ಷ ಕಠಿಣ ಶಿಕ್ಷೆ ವಿಧಿಸಲ್ಪಟ್ಟಿತು. ಆಲಿಪುರ ಮತ್ತು ಡೆಹರಾಡೂನ್ ಸೆರೆಮನೆ ಪಂಡಿತರ ನೆಲೆವೀಡಾಯಿತು. ಪಂಡಿತರು ಡೆಹರಾಡೂನ್ ತುರಂಗದಲ್ಲಿರುವಾಗ ಕಮಲಾನೆಹರು ತೀವ್ರ ಖಾಹಿಲೆಯಲ್ಲಿ ಹಾಸಿಗೆ ಹಿಡಿದಿದ್ದರು. ಕಮಲಾರವರ ಪಕ್ಕದಲ್ಲಿ ನೆಹರು ಆಗ ಬೇಕಿತ್ತು. ಆದರೆ ಕಾರಾಗೃಹದ ಬಾಗಿಲು ನೆಹರು

ರವರನ್ನು ಬಂಧಿಸಿತ್ತು. ೧೯೩೩ನೇ ಜುಲೈ ತಿಂಗಳ ಕೊನೆಗೆ ಕಮಲಾ ನೆಹರುರವರ ಸ್ಥಿತಿ ಭಯಂಕರವಾಯಿತು. ಸ್ವಲ್ಪವೇ ದಿನಗಳಲ್ಲಿ ವಿಷಮ ಸ್ಥಿತಿಗೇರಿತು. ಆಗಸ್ಟ್ ೧೧ನೇ ತಾರೀಖು ಜವಹರರನ್ನು ಡೆಹರಾಡೂನ್ ಸೆರೆಮನೆಯಿಂದ ಅಲಹಾಬಾದಿಗೆ ಕರೆತಂದು ಅಲ್ಲಿ ತಾತ್ಕಾಲಿಕ ಬಿಡುಗಡೆ ಮಾಡಲಾಯಿತು. ಜವಹರರ ಬಿಡುಗಡೆ ಕಮಲಾರವರಿಗೆ ಹರ್ಷವನ್ನು ಉಂಟುಮಾಡಿತು. ಇಂದಿರೆಯೂ ಕೂಡ ಶಾಂತಿನಿಕೇತನದಿಂದ ತಾಯಿಯ ಬಳಿಯಲ್ಲಿರಲು ಬಂದಿದ್ದಳು.

## ಜವಹರರ ಅನುತಾಪ

ಜವಹರರು ತಮ್ಮ ಆತ್ಮಕಥೆಯಲ್ಲಿ ಕಮಲಾರವರನ್ನು ನೋಡಿದಾಗ ಆಗಿನ ತಮ್ಮ ಮನಸ್ಸನ್ನು ಹೃದಯಂಗಮವಾಗಿ ಚಿತ್ರಿಸಿದ್ದಾರೆ. “ ಅಲ್ಲಿ ಅವಳು ಕೃಶಳಾಗಿ, ಒಣಗಿ ಮಲಗಿದ್ದಳು. ಅವಳು ತನ್ನ ಮೊದಲಿನ ಛಾಯೆ ಮಾತ್ರ ಆಗಿದ್ದಳು. ಶಕ್ತಿಗುಂದಿದವಳಾದರೂ ಖಾಹಿಲೆಯ ಎದರು ಧೈರ್ಯದಿಂದ ಹೋರಾಡುತ್ತಿದ್ದಳು. ನನ್ನನ್ನು ಅವಳು ಅಗಲಿ ಹೋಗುವಳು ಎಂಬ ಯೋಚನೆಯು ಬಂದಾಗ ಮನಸ್ಸು ಕದಡಿಹೋಗುತ್ತಿತ್ತು. ನಮ್ಮ ಮದುವೆಯಾಗಿ ಹದಿನೆಂಟು ವರ್ಷವಾಗಿ ಹೋಯಿತು. ನನ್ನ ಮನಸ್ಸು ಅಂದಿನ ದಿನದ ನೆನಪು ಮಾಡಿಕೊಂಡಿತು. ಅಂದಿನಿಂದ ಇಂದಿನ ವರೆಗೆ ನಡೆದ ಘಟನಾವಳಿಗಳನ್ನು ಜ್ಞಾಪಕಕ್ಕೆ ತಂದುಕೊಂಡೆ. ನನಗಾಗ ೨೬ ವರ್ಷ; ಅವಳಿಗೆ ಕೇವಲ ೧೭ ವರ್ಷ. ಪ್ರಪಂಚದ ಜೀವನ ತಿಳಿಯದ ನೈಜಸ್ವಭಾವವುಳ್ಳ ಕೇವಲ ಹುಡುಗಿಯಾಗಿದ್ದಳು. ನನಗೂ ಆಕೆಗೂ ಒಂಭತ್ತು ವರ್ಷದ ಅಂತರವಿತ್ತು. ಅದಕ್ಕಿಂತ ಹೆಚ್ಚಾಗಿ ನಮ್ಮ ಮನಸ್ಸಿನ ಬೆಳವಣಿಗೆಯ ಮಟ್ಟದ ಅಂತರ ಜಾಸ್ತಿ ಇತ್ತು. ಅವಳಿಗಿಂತ ನನ್ನ ಮನಸ್ಸು ಬೆಳೆದಿತ್ತು. ಪ್ರಾಪಂಚಿಕ ಜೀವನದ ಅನುಭವವಿದ್ದಂತೆ ಕಂಡ ನಾನು ತೀರ ಹುಡುಗನಂತೆ ವರ್ತಿಸುತ್ತಿದ್ದೆ. ಮೊಗ್ಗು ಅರಳಿದಂತೆ ಅರಳುತ್ತಿರುವ

ಈ ಸೂಕ್ಷ್ಮ ಹುಡುಗಿಯ ಮನಸ್ಸನ್ನು ಅರಿತುಕೊಳ್ಳಲು, ತಯಾರ್ಮಾಡಲು, ವಿನಯದಿಂದ ಕೂಡಿದ ಮೃದುವಾದ ತರಬೇತು ಅವಶ್ಯಕವೆಂದು ನನಗೆ ಆಗ ತಿಳಿದಿರಲಿಲ್ಲ. ನಾನು ಅವಳು ಒಬ್ಬರಿಗೊಬ್ಬರು ಆಕರ್ಷಿತರಾಗಿದ್ದೆವು; ನಾವು ಚೆನ್ನಾಗಿಯೇ ಬಾಳಿದೆವು. ಆದರೆ ನಮ್ಮ ಹಿನ್ನೆಲೆ ಬೇರೆಬೇರೆ ಇದ್ದುದರಿಂದ ನಮ್ಮಲ್ಲಿ ಹೊಂದಿಕೆ ಅಷ್ಟಿರಲಿಲ್ಲ. ಈ ಹೊಂದಿಕೆ ಇಲ್ಲದಿದ್ದುದು ಆಗಾಗ ನಮ್ಮಲ್ಲಿ ಜಗಳವನ್ನು ತಂದೊಡ್ಡಿತು, ಈ ಹುಡುಗಾಟಿಕೆಯ ಜಗಳ ಬಹಳ ದಿನಗಳಿರುತ್ತಿದ್ದಿಲ್ಲ; ಬಹು ಜಾಗ್ರತೆ ಒಪ್ಪಂದದಲ್ಲಿ ಪರಿಣಾಮಗೊಳ್ಳುತ್ತಿತ್ತು. ಇಬ್ಬರಿಗೂ ಶೀಘ್ರವಾಗಿ ಕೋಪ ಬರುತ್ತಿತ್ತು. ನಮ್ಮ ಹುಡುಗತನದ ಗೌರವ ಕಾಪಾಡಿಕೊಳ್ಳಲು ಇದ್ದ ಬುದ್ಧಿ, ನವಿರಾದ ಸ್ವಭಾವ ಕೋಪಕ್ಕೆಡೆಮಾಡಿ ಕೊಡುತ್ತಿತ್ತು. ಇದರ ಮಧ್ಯೆ ನಮ್ಮ ಆತ್ಮೀಯತೆ ಬೆಳೆಯಿತು. ನಮ್ಮ ಮದುಯಾಗಿ ೨೧ ತಿಂಗಳ ನಂತರ, ನಮ್ಮ ಒಬ್ಬಳೇ ಮಗಳು ಇಂದಿರಾ ಹುಟ್ಟಿದಳು.

" ನಮ್ಮ ಮದುವೆಯ ಸಂದರ್ಭದಲ್ಲಿಯೇ ರಾಜಕೀಯದಲ್ಲಿ ಹೊಸ ಬೆಳವಣಿಗೆಯು ಪ್ರಾರಂಭವಾಗಿತ್ತು. ರಾಜಕೀಯದಲ್ಲಿ ನನ್ನ ಭಾಗವೂ ಬೆಳೆಯುತ್ತಾ ಹೋಯಿತು. ಹೋಂ ರೂಲ್ ದಿನಗಳು, ಮಾರ್ಷಿಯಲ್ ಲಾ ದಿನಗಳು, ಅಸಹಕಾರದ ದಿನಗಳು ಒಂದಾದಮೇಲೊಂದರಂತೆ ಬರಲು ಆರಂಭಿಸಿದುವು. ಅವೆಲ್ಲವುಗಳಲ್ಲಿಯೂ ನಾನು ಭಾಗವಹಿಸಿದೆ. ರಾಜಕೀಯದ ಬಿರುಗಾಳಿಯಲ್ಲಿ ಸಿಕ್ಕಿ ಸಂಪೂರ್ಣವಾಗಿ ನಾನು ಅವಳನ್ನು ಮರೆತೆನು. ಅಷ್ಟೇ ಅಲ್ಲ, ಅವಳನ್ನು ಏಕಾಂಗಿಯಾಗಿ ತನ್ನ ಕಾಲ ಮೇಲೆ ತಾನು ನಿಲ್ಲಬೇಕಾದ ಪರಿಸ್ಥಿತಿಯನ್ನು ಒದಗಿಸಿದೆನು. ಯಾವಾಗ ಅವಳಿಗೆ ನನ್ನ ಸಂಪೂರ್ಣ ಸಹಕಾರವು ಬೇಕಿತ್ತೋ ಆ ಸಮಯ ನಾನು ಅವಳನ್ನು ಮರೆತಿದ್ದೆನು. ಆದರೂ ನನ್ನ ಪ್ರೀತಿ ಹೆಚ್ಚಾಗಿ ಬೆಳೆಯಿತು, ಬಲಿಯಿತು; ನನ್ನನ್ನು ಸಂತೈಸಲು ಅವಳು ಯಾವಾಗಲೂ ತನ್ನ ಹೃದಯವನ್ನೇ ಮೀಸಲಾಗಿಟ್ಟಿದ್ದಳು. ಅವಳೇನೋ ನನಗೆ ಶಕ್ತಿಯನ್ನು ಕೊಡುತ್ತಿದ್ದಳು. ಆದರೆ ತನ್ನನ್ನು ಮರೆತೆನೆಂದು ಅವಳು ನೊಂದಿರಬೇಕು. ಅವಳೊಂದಿಗೆ ಸಂಪೂರ್ಣ ನಿರ್ದಯತೆಯಿಂದಿರುವುದು, ಇಂತಹ ಅರ್ಧಂಬರ್ಧವಾದ ನಡವಳಿಕೆಗಿಂತ ಚೆನ್ನಾಗಿತ್ತೋ ಏನೋ !

“ ನಂತರ ಅವಳಿಗೆ ಖಾಹಿಲೆ; ನನಗೆ ಸೆರೆಮನೆ ವಾಸ. ನಮ್ಮ ಭೇಟಿ ಮಾಡಲು ಅನುಮತಿಯಿತ್ತಾಗ ಮಾತ್ರ. ಅಸಹಕಾರ ಚಳುವಳಿ ಅವಳನ್ನು ಹೋರಾಟದ ರಣರಂಗದಲ್ಲಿ ತಂದಿತು. ಅವಳು ನನ್ನಂತೆ ಸೆರೆಮನೆಗೆ ಹೋದಾಗ ಎಷ್ಟು ಸಂತೋಷಪಟ್ಟಳೋ! ನಾವು ಆಗ ಇನ್ನೂ ಹತ್ತಿರ ಹತ್ತಿರ ಬಂದೆವು. ಅನಿರೀಕ್ಷಿತವಾಗಿ ಆಗುತ್ತಿದ್ದ ನಮ್ಮ ಭೇಟಿಗಳು ಬಹಳ ಬೆಲೆಯುಳ್ಳದ್ದಾಗುತ್ತಿದ್ದುವು. ಆ ಭೇಟಿಯ ದಿನಕ್ಕಾಗಿ ನಾವು ಎದುರು ನೋಡುತ್ತಿದ್ದೆವು. ನಮ್ಮ ಭೇಟಿಯಲ್ಲಿ ಏನಾದರೊಂದು ಹೊಸದು ಇರುತ್ತಿದ್ದುದರಿಂದ ನಮಗೆ ಬೇಸರವೇ ಆಗುತ್ತಿರಲಿಲ್ಲ. ನಮ್ಮಿಬ್ಬರಲ್ಲಿ ಒಬ್ಬರಿಗೊಬ್ಬರು ಹೊಸದನ್ನು ಕಂಡುಹಿಡಿಯುತ್ತಿದ್ದೆವು. ಕೆಲವು ಸಲ ಆ ಹೊಸದು ಇಬ್ಬರಿಗೂ ನಮ್ಮದೇ ಆದ ರೀತಿಯಲ್ಲಿ ಹಿಡಿಸುತ್ತಿತ್ತು. ನಾವು ಬೆಳೆದು ದೊಡ್ಡವರಾದರೂ, ನಮ್ಮ ಮತಭೇದಗಳು ಹುಡುಗಾಟಿಕೆಯಂತಿದ್ದುವು.

“ ಹದಿನೆಂಟು ವರ್ಷಗಳು ನಮ್ಮ ಸಂಸಾರ ಸಾಗಿದ್ದರೂ ಆಕೆ ಹುಡುಗಿಯಂತೆ ಇನ್ನೂ ಮದುವಣಗಿತ್ತಿಯಂತೆಯೇ ಇದ್ದಳು. ಮದುವೆಯಾದಂತೆ ಕಾಣುತ್ತಲೇ ಇರಲಿಲ್ಲ. ಬಹಳ ದಿನಗಳ ಹಿಂದೆ ನಮ್ಮ ಮನೆಗೆ ಕನ್ಯೆಯಾಗಿ ಬಂದಂತೆಯೇ ಇದ್ದಳು. ಆದರೆ ನಾನು ಮಾತ್ರ ಬದಲಾಯಿಸಿದ್ದೆ. ನನ್ನ ವಯಸ್ಸಿಗೆ ನಾನು ಚುರುಕಾಗಿ, ಚಟುವಟಿಕೆಯಿಂದ ಇದ್ದರೂ— ಇನ್ನೂ ಹುಡುಗುತನದ ಚಹರೆ ಇದ್ದವೆಂದು ಅನೇಕರು ಹೇಳುತ್ತಿದ್ದರೂ— ನನ್ನ ಲಕ್ಷಣಗಳು ನನ್ನ ವಯಸ್ಸನ್ನು ಹೇಳುತ್ತಿದ್ದುವು. ನನ್ನ ತಲೆಯು ಅರ್ಧ ಬೋಳಾಗಿತ್ತು. ನನ್ನ ಕೂದಲು ಬೆಳ್ಳಗಾಗಿತ್ತು. ಗೆರೆಗಳು ಮತ್ತು ಸುಕ್ಕುಗಳು ನನ್ನ ಮುಖದ ಮೇಲೆ ಕಾಣುತ್ತಿದ್ದುವು. ನನ್ನ ಕಣ್ಣಿನ ಸುತ್ತ ಕಪ್ಪು ಛಾಯೆ ಆವರಿಸಿಕೊಂಡಂತಿತ್ತು. ಕಳೆದ ನಾಲ್ಕು ವರ್ಷಗಳ ಕಷ್ಟಗಳು ಮತ್ತು ದುಃಖಗಳು ನನ್ನ ಮನಸ್ಸಿನ ಮೇಲೆ, ದೇಹದ ಮೇಲೆ ಪರಿಣಾಮ ಮಾಡಿದ್ದುವು. ಅನೇಕ ಸಲ ಈ ದಿನಗಳಲ್ಲಿ ನಾನೂ ಕಮಲಾ ಹೊರಗೆ ಹೋದಾಗ ಅವಳನ್ನು ನನ್ನ ಮಗಳೆಂದು ತಿಳಿದುಕೊಳ್ಳುತ್ತಿದ್ದರು. ಅವಳು ಮತ್ತು ಇಂದಿರಾ ಅಕ್ಕತಂಗಿಯರಂತೆ ಕಾಣುತ್ತಿದ್ದರು.

“ ಹದಿನೆಂಟು ವರ್ಷಗಳ ನಮ್ಮ ಸಂಸಾರ! ಆದರೆ ಆ ಅವಧಿಯಲ್ಲಿ ಎಷ್ಟು ವರ್ಷ ನಾನು ಸೆರೆಮನೆಯಲ್ಲಿ, ಕಮಲಾ ಆಸ್ಪತ್ರೆ ಮತ್ತು ಆರೋಗ್ಯ

ಧಾಮುಗಳಲ್ಲಿ ಕಳೆದಿರಲಿಲ್ಲ! ಆದರೂ ಈಗ ನಾನು ಸೆರೆಮನೆಯ ವಾಸ ಅನುಭವಿಸುತ್ತಿದ್ದೆ. ಆಕೆ ಜೀವನದ ಹೋರಾಟ ನಡೆಸುತ್ತ ಖಾಹಿಲೆಯಲ್ಲಿ ಬಿದ್ದಿದ್ದಳು. ಅವಳ ಆರೋಗ್ಯದ ವಿಷಯದಲ್ಲಿ ಅವಳ ನಿರ್ಲಕ್ಷ್ಯೆಯನ್ನು ನೋಡಿ ನನಗೆ ಸ್ವಲ್ಪ ರೇಗಿತು. ಆದರೂ ನಾನು ಅವಳನ್ನು ಹೇಗೆ ದೂರಲಿ? ರಾಷ್ಟ್ರದ ಹೋರಾಟದಲ್ಲಿ ತನ್ನ ಸಂಪೂರ್ಣ ಸೇವೆ ಸಲ್ಲಿಸಲು ಅವಳ ಖಾಹಿಲೆ ತಡೆ ಬಂತು. ಅವಳ ಆಸೆ ಸ್ಫೂರ್ತಿ ದಿನದಿನಕ್ಕೆ ಕರಗಿ ಹೋಗುತ್ತಿದ್ದುವು. ದೇಹಾರೋಗ್ಯವಿಲ್ಲದೆ ಯಾವುದನ್ನೂ ಮಾಡಲು ಅವಳಿಗೆ ಸಾಧ್ಯವಿರಲಿಲ್ಲ. ಈ ಕಡೆ ಕೆಲಸವೂ ಸಾಗುತ್ತಿರಲಿಲ್ಲ. ಆ ಕಡೆ ಆರೈಕೆಗೆ ಮನಸ್ಸೂ ಇರುತ್ತಿರಲಿಲ್ಲ. ಅವಳಲ್ಲಿದ್ದ ಆ ಜ್ಯೋತಿ ದಿನದಿನಕ್ಕೆ ಅವಳ ದೇಹವನ್ನು ಕುಗ್ಗಿಸುತ್ತ ಬಂದಿತು.

"ನನಗವಳು ತುಂಬಾ ಬೇಕಾಗಿದ್ದಾಗ ನನ್ನನ್ನು ಅವಳೆಂದಿಗೂ ಬಿಡಳು. ನಾವೀಗ ಇಬ್ಬರೂ ಒಬ್ಬರನ್ನೊಬ್ಬರು ಅರಿತುಕೊಳ್ಳಲು ಪ್ರಾರಂಭ ಮಾಡಿಲ್ಲವೇನು? ನಮ್ಮ ಜೀವನ ಈಗ ಪ್ರಾರಂಭವಾಗಿದೆ. ನಮ್ಮನಮ್ಮಲ್ಲಿ ಇಬ್ಬರೂ ಬಹಳವಾಗಿ ನಂಬಿಕೊಂಡಿದ್ದೆವು. ನಾವಿಬ್ಬರೂ ಜೊತೆಯಾಗಿ ಮಾಡಬೇಕಾದದ್ದು ಬಹಳವಿತ್ತು."

## ಜವಹರರ ಬಿಡುಗಡೆ

ಈ ರೀತಿ ಸಾಗಿತ್ತು ಜವಹರರ ಮನಸ್ಸು. ಪ್ರತ್ಯಕ್ಷವಾಗಿ ರಾಜಕೀಯ ದಲ್ಲಿ ಕೈಹಾಕಲು ಜವಹರರು ಮನಸ್ಸುಮಾಡಲಿಲ್ಲ. ಕಮಲಾರವರ ದೇಹ ಸ್ಥಿತಿಯ ವಿಷಯವಾಗಿ ಗಾಂಧಿಜೀಗೆ ಕಾಗದ ಬರೆದರು. ಸರ್ಕಾರ ನಿರ್ದಿಷ್ಟ ವಾಗಿ ಬಿಡುಗಡೆ ಮಾಡಿರಲಿಲ್ಲವಾದ್ದರಿಂದ, ಅವರನ್ನು ಎಂದು ಸೆರೆಮನೆಗೆ ಕರೆದುಕೊಂಡು ಹೋಗುತ್ತಾರೋ ತಿಳಿದಿರಲಿಲ್ಲ. ಜವಹರರು ಬಂದಮೇಲೆ ಕಮಲಾರವರ ದೇಹಸ್ಥಿತಿಯು ಸ್ವಲ್ಪಸ್ವಲ್ಪವಾಗಿ ಗುಣಮುಖವಾಗುತ್ತಾ

ಬಂದಿತು. ಸರ್ಕಾರಕ್ಕೆ ಕಮಲಾನೆಹರುರವರ ದೇಹಸ್ಥಿತಿಯ ವಿಚಾರವಾಗಿ ಪ್ರತಿದಿನವೂ ಸುದ್ದಿ ಹೋಗುತ್ತಿತ್ತು. ಅವರು ಸ್ವಲ್ಪ ಗುಣಮುಖರಾಗುತ್ತ ಇದ್ದಾರೆಂದು ತಿಳಿದ ಕೂಡಲೇ ಪುನಃ ಜವಹರರನ್ನು ಹನ್ನೊಂದು ದಿನಗಳ ನಂತರ ಆಗಸ್ಟ್ ೨೪ರಲ್ಲಿ ನೈನಿ ಸೆರೆಮನೆಗೆ ಕರೆದೊಯ್ದರು. ಮುಪ್ಪಿನ ತಾಯಿ ಹಾಸಿಗೆಯಿಂದ ಎದ್ದು ಜವಹರರನ್ನು ಅಪ್ಪಿಕೊಂಡು ಬೀಳ್ಕೊಟ್ಟರು. ಆ ದೃಶ್ಯ ಮನಕರಗುವಂಥಹುದಾಗಿತ್ತು.

ಜವಹರಲಾಲರ ದಸ್ತಗಿರಿ ಕಮಲಾನೆಹರುರವರ ಮೇಲೆ ತುಂಬಾ ಕೆಟ್ಟ ಪರಿಣಾಮ ಮಾಡಿತು. ಅಗಲಿಕೆಯ ದುಃಖ ಇಮ್ಮಡಿಸಿತು. ಜವಹರ ಲಾಲರಿಗೆ ಸ್ವಲ್ಪ ದಿನಗಳ ಮಟ್ಟಿಗೆ ದಿನವೂ ವೈದ್ಯರ ವರದಿಯನ್ನು ತಂದು ಒಪ್ಪಿಸುತ್ತಿದ್ದರು. ಕೊನೆಗೆ ಕಮಲಾರವರ ದೇಹಸ್ಥಿತಿ ವಿಪರೀತ ಕೆಡುತ್ತ ಬಂದಂತೆ ಆ ವರದಿಗಳನ್ನೂ ನಿಲ್ಲಿಸಿಬಿಟ್ಟರು. ಪಂಡಿತರ ಹೃದಯದ ನೋವು ಬಲವಾಯಿತು. ಕಮಲಾರವರ ಜೊತೆಯಲ್ಲಿರಬೇಕೆಂಬ ಆಸೆ ತೀವ್ರವಾಯ್ತು. ಬೊಂಬಾಯಿ ಕಾಂಗ್ರೆಸ್ ಅಧಿವೇಶನ, ಬಾಬು ರಾಜೇಂದ್ರ ಪ್ರಸಾದರ ಅಧ್ಯಕ್ಷತೆಯಲ್ಲಿ ನಡೆಯುವುದಿತ್ತು. ಆ ಹೊತ್ತಿಗೆ ನೆಹರುರವರನ್ನು ಬಿಡುಗಡೆ ಮಾಡುತ್ತಾರೆಂದು ನಂಬಲಾಯಿತು. ಅದು ಬರೀ ನಂಬಿಕೆಯೇ ಆಯಿತು. ದಸ್ತಗಿರಿಯಾದ ಒಂದು ತಿಂಗಳ ನಂತರ ಕಮಲಾರವರನ್ನು ನೋಡಲು ಜವಹರರನ್ನು ಕರೆದುಕೊಂಡು ಹೋದರು. ವಾರಕ್ಕೆರಡು ಸಲ ಹೀಗೆಯೇ ಕರೆದುಕೊಂಡು ಹೋಗಬಹುದೆಂದು ತಿಳಿಸಿದ್ದರು. ಆದರೆ ಆ ಮೇಲೆ ಹಾಗೆ ಮಾಡಲೇ ಇಲ್ಲ. ಇದ್ದಕ್ಕಿದ್ದ ಹಾಗೆ ಆಕೆಯ ದೇಹಸ್ಥಿತಿ ವಿಷಮಾವಸ್ಥೆಗೆ ಬಂದಿತು. ಸೆಪ್ಟೆಂಬರ್ ತಿಂಗಳು ಕಳೆಯಿತು. ಆ ಮೂವತ್ತು ದಿನಗಳು ಪಂಡಿತರು ಅತಿ ಕಷ್ಟದಲ್ಲಿ, ಮನಸ್ಸಿನ ಹೊಯ್ದಾಟದಲ್ಲಿ ಕಳೆದರು. ಹೀಗೆ ಹಿಂದೆಂದೂ ಅವರು ಕಷ್ಟಪಟ್ಟಿರಲಿಲ್ಲ.

ಪಂಡಿತ ಜವಹರಲಾಲರು ರಾಜಕೀಯದಲ್ಲಿ ಭಾಗವಹಿಸುವುದಿಲ್ಲ ವೆಂದು ಸರ್ಕಾರಕ್ಕೆ ಬಾಯಿಯಲ್ಲಿ ಮಾತು ಕೊಟ್ಟರೆ ಸಾಕು, ಸರ್ಕಾರವು ಅವರನ್ನು ಬಿಡಲು ತಯಾರಾಗಿತ್ತು. ಸರ್ಕಾರ ಸ್ನೇಹಿತರ ಮುಖಾಂತರ ಹಾಗೆ ಹೇಳಿಯೂ ಹೇಳಿಸಿತು. ಪಂಡಿತರಿಗೆ ಆ ಸಮಯದಲ್ಲಿ ರಾಜಕೀಯ

ಬೇಡವಾಗಿತ್ತೇನೋ ನಿಜ. ಆದರೆ ಸರ್ಕಾರಕ್ಕೆ ಆರೀತಿ ಮಾತು ಕೊಟ್ಟು ಬಿಡುಗಡೆಯಾಗುವ ಜೀವವೇ ಅದು! ಅವರ ಪ್ರತಿಜ್ಞೆಗಳು, ಅವರು ಹೋರಾಡುತ್ತಿದ್ದ ಪವಿತ್ರವಾದ ಕೆಲಸ, ಅವರ ಗೆಳೆಯರು ಮತ್ತು ತಮಗೆ ಎರಡು ಬಗೆದುಕೊಳ್ಳಲು ಸಾಧ್ಯವೇ? ಯಾವುದನ್ನು ಇಲ್ಲಿಯ ವರೆಗೆ ಪವಿತ್ರವೆಂದು ಪರಿಗಣಿಸುತ್ತಿದ್ದರೋ ಅದಕ್ಕೆಲ್ಲ ಸಾವಿನ ಪೆಟ್ಟು ಕೊಟ್ಟಂತೆ ಆಗುತ್ತಿತ್ತು. ಕಮಲಾರವರ ದೇಹಸ್ಥಿತಿ ಬರಬರುತ್ತ ವಿಷಮಾವಸ್ಥೆಗೆ ಏರಿ ಜವಹರಲಾಲರು ಪಕ್ಕದಲ್ಲಿದ್ದರೆ ಸಾವಿನ ದವಡೆಯಿಂದ ಪಾರಾಗಬಹುದೆಂಬ ಒಂದು ದೂರದ ಆಸೆಯು ಇತ್ತು. ಆತ್ಮಗೌರವಕ್ಕೆ ಧಕ್ಕೆ ತಂದುಕೊಂಡು ಆಕೆ ಬದುಕುವ ಆಸೆಗೆ ಅವಕಾಶ ಕಲ್ಪಿಸಲು ಅವರ ಸ್ವಂತ ಪ್ರತಿಷ್ಠೆ ಅಡ್ಡ ಬಂತೋ ಏನೋ! ಆದರೆ ಈ ಸಂದರ್ಭ ಪಂಡಿತರಿಗೆ ಬರಲಿಲ್ಲ. ಕಮಲಾ ಈ ವರ್ತನೆಯನ್ನು ಎಂದೂ ಸಹಿಸುತ್ತಿರಲಿಲ್ಲ. ಹಾಗೇನಾದರೂ ಪಂಡಿತರು ಸರ್ಕಾರಕ್ಕೆ ಮಾತು ಕೊಟ್ಟಿದ್ದರೆ ಆಕೆಗೆ ಬಲವಾದ ಪೆಟ್ಟು ಬೀಳುತ್ತಿತ್ತು. ರಾಷ್ಟ್ರಸೇವಿಕೆಯಲ್ಲವೇ ಆಕೆ! ಸ್ವಾತಂತ್ರ್ಯಕ್ಕೋಸ್ಕರ ಹೋರಾಡಿದುದರ ಫಲವಾಗಿ ತಾನೇ, ಹೀಗೆ ಆಕೆ ನರಳುತ್ತಿದ್ದುದು.

ಅಕ್ಟೋಬರ್ ತಿಂಗಳಿನಲ್ಲಿ ಪುನಃ ಕಮಲಾರವರನ್ನು ನೋಡಲು ಪಂಡಿತರನ್ನು ಕರೆದೊಯ್ದರು. ಭಯಂಕರ ಜ್ವರ ಬಂದು ಆ ಧಗೆಯಲ್ಲಿ ಆಕೆ ಮಲಗಿದ್ದರು. ಜವಹರಲಾಲರು ಆಗ ಆಕೆಯ ಪಕ್ಕದಲ್ಲಿರಬೇಕೆಂದು ಅವರ ಮನಸ್ಸಿತ್ತು. ಸೆರೆಮನೆಗೆ ಹೋಗುವ ಅವಧಿ ಸಮೀಪಿಸಿದಾಗ ಕಮಲಾ ಜವಹರರನ್ನು ಪಕ್ಕದಲ್ಲಿ ಕೈಸನ್ನೆ ಮಾಡಿ ಕರೆದು, ಕಿವಿಮಾತು ಹೇಳಿದರು. ಆ ಮಾತಿನಲ್ಲಿ ಧೈರ್ಯವಿತ್ತು, ಗಾಂಭೀರ್ಯವಿತ್ತು, ನಿರ್ಧಾರವಿತ್ತು. ಸ್ವಾತಂತ್ರ್ಯದ ಕೆಚ್ಚಿತ್ತು. ನಗುತ್ತಾ ಹೇಳಿದರು: "ನೀವು ಸರ್ಕಾರಕ್ಕೆ ಕ್ಷಮಾಪಣೆಯನ್ನು ಬರೆದುಕೊಟ್ಟು ಹೊರಗೆ ಬರಬೇಕೆಂದು ಮಾಡಿದ್ದೀರಂತೆ, ನಿಜವೇನು? ಹಾಗೇನಾದರೂ ಮಾಡೀರಾ! ಖಂಡಿತ ಮಾಡಬೇಡಿ."

ಕಮಲಾರವರಿಗೆ ಸ್ವಲ್ಪ ಗುಣಮುಖವಾದ ಕೂಡಲೆ ಯಾವುದಾದರೊಂದು ಗುಡ್ಡಗಾಡಿನಲ್ಲಿರುವ ಆರೋಗ್ಯ ಕೇಂದ್ರಕ್ಕೆ ಕರೆದುಕೊಂಡು ಹೋಗಬೇಕೆಂದು ನಿರ್ಧರಿಸಲಾಗಿತ್ತು. ಆದರೆ ಆಕೆಗೆ ಗುಣಮುಖ ಕಂಡುಬರಲೇ ಇಲ್ಲ; ಮತ್ತಷ್ಟು ಇಳಿಮುಖವಾಯಿತು. ಅದೇ ಸ್ಥಿತಿಯಲ್ಲಿಯೇ ಅವರನ್ನು

ಭೋವಾಲಿ ಎಂಬ ಗುಡ್ಡಗಾಡಿನ ಆರೋಗ್ಯಕೇಂದ್ರಕ್ಕೆ ಕರೆದುಕೊಂಡು ಹೋದರು. ಅದಕ್ಕೆ ಹಿಂದಿನ ದಿನ ಕಮಲಾರವರನ್ನು ನೋಡಲು ಪಂಡಿತ ರನ್ನು ಕರೆದುಕೊಂಡು ಹೋಗಿದ್ದರು. ಪಂಡಿತರು ಕಮಲಾರವರನ್ನು ಬೀಳ್ಕೊಟ್ಟರು. ಅವರ ಮನಸ್ಸಿನಲ್ಲಿ ಆಗ ಅನೇಕ ಭಾವನೆಗಳು ಬಂದುವು. ಕಮಲಾರವರನ್ನು ಪುನಃ ನೋಡಲಾದೀತೇ ? ಅಥವಾ ಅದೇ ಕೊನೆಯ ಭೇಟಿಯೋ ಏನೋ ಎಂಬ ಸಂಶಯದ ಪರದೆ ಅವರ ಮೇಲೆ ಬಿದ್ದಿತು.

ಮೂರು ವಾರಗಳ ನಂತರ ಪಂಡಿತರನ್ನು ಕಮಲಾರ ಹತ್ತಿರದಲ್ಲಿರಲು ನೈನಿ ಸೆರೆಮನೆಯಿಂದ ಆಲ್ಮೋರಾಕ್ಕೆ ವರ್ಗಾಯಿಸಿದರು. ದಾರಿಯಲ್ಲಿ ಭೋವಾಲಿಯಲ್ಲಿಳಿದು ಕಮಲಾರವರನ್ನು ನೋಡಿಕೊಂಡು ಹೋದರು. ಅಲ್ಲಿಯ ಹವಾ ಆಕೆಗೆ ಸ್ವಲ್ಪ ಗುಣ ಕೊಟ್ಟಿತ್ತು. ಆದರೆ ಕೆಲವು ದಿನಗಳ ಮೇಲೆ ಪುನಃ ರೋಗ ಉಲ್ಬಣವಾಯಿತು. ಪಂಡಿತರು ಆಲ್ಮೋರಾದಲ್ಲಿ ಮೂರುವರೆ ತಿಂಗಳ ಅವಧಿಯಲ್ಲಿ ೫ ಸಲ ಆಕೆಯನ್ನು ಭೇಟಿ ಮಾಡಿದ್ದರು. ಆದರೂ ಬ್ರಿಟಿಷ್ ಸರಕಾರ, ವಾರಕ್ಕೆರಡು ಸಲ ಆಕೆಯನ್ನು ನೋಡಲು ಪಂಡಿತರಿಗೆ ಅವಕಾಶ ಕೊಡಲಾಗುತ್ತಿದೆ ಎಂದು ಹೇಳಿತ್ತು. ಈ ಭೇಟಿಗಳು ಆಕೆಗೆ ಸಂತೃಪ್ತಿಯನ್ನುಂಟುಮಾಡುತ್ತಿದ್ದುವು. ಪಂಡಿತರಿಗೆ ಆಕೆಯನ್ನು ಬಿಟ್ಟು ಹೋಗಲು ಮನಸ್ಸೇ ಇರುತ್ತಿರಲಿಲ್ಲ. ಇವರಿಬ್ಬರಿಗೂ ತಾತ್ಕಾಲಿಕ ಅಗಲಿಕೆ ಬಹಳ ಹಿಂಸೆ ಕೊಡುತ್ತಿತ್ತು. ಈ ಮಧ್ಯೆ ಒಂದು ದಿನ ಇದ್ದಕ್ಕಿದ್ದ ಹಾಗೆಯೇ, ಜವಹರರ ತಾಯಿಗೆ ಪಾರ್ಶ್ವವಾಯು ಹಿಡಿದು ಹಾಸಿಗೆಯನ್ನು ಹಿಡಿದಿದ್ದಾರೆಂದು ಸುದ್ದಿ ಬಂತು. ಪಂಡಿತರನ್ನು ತಾಯಿಯ ಹತ್ತಿರ ಬೊಂಬಾಯಿಗೆ ಕಳುಹಿಸಬೇಕೆಂದು ನಿರ್ಧರಿಸಿತ್ತು ಸರ್ಕಾರ. ಆದರೆ ಸ್ವರೂಪರಾಣಿಗೆ ಗುಣವಾಗುತ್ತ ಬಂದಿತು. ಆದ್ದರಿಂದ ಜವಹರಲಾಲರನ್ನು ಆಲ್ಮೋರಾ ಸೆರೆಮನೆಯಿಂದ ಬದಲಾಯಿಸಲಿಲ್ಲ.

## ಯುರೋಪಿಗೆ ಕಮಲಾ

೧೯೩೫ನೇ ಮೇ ತಿಂಗಳಲ್ಲಿ ಕಮಲಾ ಚಿಕಿತ್ಸೆಗಾಗಿ ಯುರೋಪಿಗೆ ತೆರಳಿದರು. ಸೆಪ್ಟಂಬರ್ ನಾಲ್ಕನೇ ತಾರೀಖು ಪಂಡಿತ ಜವಹರಲಾಲರನ್ನು

ಅವರ ಹೆಂಡತಿಯ ಖಾಹಿಲೆಯ ನಿಮಿತ್ತ ಬಿಡುಗಡೆಮಾಡಿದರು. ಜರ್ಮನಿಯ 'ಬ್ಲಾಕ್ ಫಾರೆಸ್ಟಿ'ನ ಆರೋಗ್ಯಧಾಮವಾದ 'ಬೇಡ್ವೇಲರ್'ನಲ್ಲಿ ಕಮಲಾ ಚಿಕಿತ್ಸೆಪಡೆದುಕೊಳ್ಳುತ್ತಿದ್ದರು. ಜವಹರರ ೫½ ತಿಂಗಳ ಶಿಕ್ಷೆಯನ್ನು ವಜಾ ಮಾಡಿ ಅವರನ್ನು ಬಿಡುಗಡೆ ಮಾಡಿದರು. ಆಲ್ಮೋರಾದಿಂದ ಅಲಹಾಬಾದಿಗೆ ಬಂದು ಮರುದಿನವೇ ಕರಾಚಿ, ಬಾಗ್ದಾದ್, ಕೈರೋ ಮುಖಾಂತರ ವಿಮಾನದಲ್ಲಿ ತೆರಳಿದರು. ಅಲೆಕ್ಸಾಂಡ್ರಿಯಾದಲ್ಲಿ ಸಮುದ್ರವಿಮಾನವನ್ನು ಹತ್ತಿ ಬ್ರಿಂಡ್ಸಿಗೆ ಬಂದು ಅಲ್ಲಿಂದ ರೈಲಿನಲ್ಲಿ ಸ್ವಿಟ್ಜರ್ಲೆಂಡಿಗೆ ಹೋದರು. ಬಿಡುಗಡೆಯಾದ ಐದು ದಿನಗಳ ನಂತರ, ಅಲಹಾಬಾದ್ ಬಿಟ್ಟು ನಾಲ್ಕು ದಿನಗಳಾದ ಮೇಲೆ, ಸೆಪ್ಟಂಬರ್ ಒಂಭತ್ತನೇ ತಾರೀಖು ಬೇಡ್ವೇಲರನ್ನು ತಲ್ಪಿದರು.

ಕಮಲಾರವರ ಮುಖದ ಮೇಲೆ ಅದೇ ಧೈರ್ಯದ ನಗೆಯು ಇತ್ತು. ಬಾಧೆಯಿಂದ ನರಳುತ್ತಿದ್ದು ತುಂಬಾ ಅಶಕ್ತರಾಗಿದ್ದರು. ಜವಹರರ ಬರವು, ಅವರನ್ನು ಸ್ವಲ್ಪ ಉತ್ತಮಸ್ಥಿತಿಗೆ ತಂದಿತು. ಆದರೆ ಸಂದಿಗ್ಧಕಾಲ ಮಾತ್ರ ಇನ್ನೂ ಕಳೆದಿರಲಿಲ್ಲ. ಕಮಲಾ ಸಾಯುವಳೆಂಬ ಯೋಚನೆಯನ್ನು ತಾರಲು ಮನಸ್ಸು ಬಾರದೆ, ಈ ಕಡೆ ವಿಷ ಘಳಿಗೆಯು ಕಳೆದರೆ ಉತ್ತಮವಾಗುವುದೆಂದು ಜವಹರರು ಭಾವಿಸುತ್ತಿದ್ದರು. ವೈದ್ಯರು ಆಗಾಗ್ಯೆ ಪುನಃ ಪುನಃ ಆಸೆ ಕೊಡುತ್ತಿದ್ದರು. ಒಂದು ಕುತ್ತ ಕಳೆಯಿತು. ಸಂಭಾಷಣೆಗೆ ಆಕೆ ನಿಶ್ಶಕ್ತಳಾಗಿದ್ದರು. ನೆಹರು ಆಗಾಗ್ಗ ಮಾತನಾಡಿಸುತ್ತಿದ್ದರು. ಆಕೆಗೆ ಆಯಾಸವಾದಂತೆ ಕಂಡಾಗ ನಿಲ್ಲಿಸುತ್ತಿದ್ದರು. ಆಗಾಗ್ಗ ಪುಸ್ತಕ ಓದುತ್ತಿದ್ದರು. ಅವುಗಳ ಪೈಕಿ ಪರ್ಲ್ ಬಕ್‌ರ 'ದಿ ಗುಡ್ ಅರ್ಥ್' ಎನ್ನುವ ಪುಸ್ತಕ ಓದಿದಾಗ ಆಕೆ ತುಂಬಾ ಆಸಕ್ತಿ ತೋರಿಸಿದರು.

ಬೆಳಗಿನಿಂದ ಸಾಯಂಕಾಲದ ವರೆಗೆ ಜವಹರರಿಗೆ ಇದೇ ಕೆಲಸ. ಆ ಹಳ್ಳಿಯ ಚಿಕ್ಕ ಮನೆಯಿಂದ ಆರೋಗ್ಯಧಾಮಕ್ಕೆ ಓಡಾಡಬೇಕಿತ್ತು. ಜವಹರರಿಗೆ ಅನೇಕ ವಿಷಯಗಳನ್ನು ಕಮಲಾರವರಿಗೆ ಹೇಳಬೇಕೆಂದು ಆಸೆ. ಹಳ್ಳಿಯ ನೆನಪುಗಳು, ಭಾರತದ ಗೆಳೆಯರು, ಮುಂದಿನ ಭವಿಷ್ಯ ಇವೇ ಅವರ ಮಾತಿನ ವಿಷಯಗಳಾಗಿತ್ತು. ಕಮಲಾರವರ ಕಣ್ಣುಗಳ ಕಾಂತಿ,

ನಗುಮುಖ, ಆಕೆಯನ್ನು ನೋಡಲು ಬಂದ ಜನರಿಗೆ ಆಶ್ಚರ್ಯವನ್ನುಂಟು ಮಾಡಿ ಆಕೆ ಬದುಕುವ ಆಸೆಯನ್ನಿಟ್ಟುಕೊಳ್ಳುತ್ತಿದ್ದರು.

ಬೇಡ್ನವೇಲರ್‌ದಲ್ಲಿ ಕಮಲಾಗೆ ಕೊಂಚ ಉತ್ತಮವಾಯಿತು. ವಿಷ ಘಳಿಗೆ ಕಳೆದಿತ್ತು. ಜವಹರರು ಇದೇ ಸಮಯದಲ್ಲಿ ಇಂದಿರೆಯೊಂದಿಗೆ ಲಂಡನ್ನಿಗೆ ಹೋಗಿ ಬಂದರು. ಬೇಡ್ನವೇಲರ್‌ನಲ್ಲಿ ಚಳಿಗಾಲ ಪ್ರಾರಂಭಿಸಿತು. ಕಮಲಾರ ದೇಹಸ್ಥಿತಿ ಇಳಿಮುಖ ತೋರಿಸಿತು. ಕ್ರಿಸ್‌ಮಸ್ ಹೊತ್ತಿಗೆ ಪುನಃ ಇನ್ನೊಂದು ಗಂಡಾಂತರ ಬಂದಿತು. ಈ ಸಲ ಆಕೆಯ ಜೀವ ಒಂದು ದಾರದಿಂದ ಹಿಡಿಮಕೊಂಡಿದೆಯೆಂಬಂತೆ ಭಾಸವಾಗುತ್ತಿತ್ತು. ಕಮಲಾ ಈ ಗಂಡಾಂತರವನ್ನು ಧೈರ್ಯದಿಂದ ಎದುರಿಸಿ ಸಾವನ್ನು ಗೆದ್ದರು.

ಬೇಡ್ನವೇಲರ್ ಕಮಲಾರವರಿಗೆ ಬೇಸರ ತಂದಿತ್ತು. ಅಲ್ಲಿಂದ ಬೇರೆಯ ಕಡೆ ಬದಲಾಯಿಸಲು ಆಸೆ ತೋರಿಸಿದರು. ಆಕೆ ಅಲ್ಲಿಂದ ಬಿಡಲು ಬೇರೆ ಇನ್ನೊಂದು ಕಾರಣವೂ ಇತ್ತು. ಅದೇ ಆರೋಗ್ಯಧಾಮದಲ್ಲಿ ಒಬ್ಬ ರೋಗಿ ತೀರಿಕೊಂಡ ಸುದ್ದಿ ಆಕೆಯ ಕಿವಿಗೆ ಬಿದ್ದಿತ್ತು. ಆ ರೋಗಿ ಆಕೆಗೆ ಆಗಾಗ್ಗೆ ಹೂವುಗಳನ್ನು ಕಳುಹಿಸುತ್ತಿದ್ದ. ಅನೇಕ ಸಲ ಆಕೆಯನ್ನು ಭೇಟಿ ಕೂಡಾ ಮಾಡಿದ್ದ. ಆ ರೋಗಿ ಐರ್ಲೆಂಡಿನವನು. ಕಮಲಾರವರಿಗಿಂತ ಉತ್ತಮವಿತ್ತು ಅವನ ಆರೋಗ್ಯ. ಹವಾಸೇವನೆಗೆ ಹೋಗಲು ಅವನಿಗೆ ಅನುಮತಿ ಸಹಾ ಇತ್ತು. ಈ ಸಾವಿನ ಸುದ್ದಿ ಕಮಲಾರವರಿಗೆ ತಿಳಿಯ ಬಾರದೆಂದು ಪ್ರಯತ್ನಪಟ್ಟಿದ್ದು ಸಾಧ್ಯವಾಗಲಿಲ್ಲ. ಈತನ ಸಾವಿಗೆ ಕಮಲಾ ತುಂಬಾ ನೊಂದುಕೊಂಡಿದ್ದರು.

೧೯೩೬ನೇ ಜನವರಿಯಲ್ಲಿ ಪಂಡಿತರು ಪ್ಯಾರಿಸ್ ಮತ್ತು ಲಂಡನ್ ನಗರಗಳಿಗೆ ಭೇಟಿಕೊಟ್ಟರು. ಅವರು ಅಖಿಲ ಭಾರತ ಕಾಂಗ್ರೆಸ್ಸಿನ ರಾಷ್ಟ್ರಾಧ್ಯಕ್ಷರಾಗಿ ೨ನೇ ಸಲ ಚುನಾಯಿತರಾದರೆಂಬ ಸುದ್ದಿ ಲಂಡನ್ನಿನಲ್ಲಿ ತಿಳಿಯಿತು. ಕಾಂಗ್ರೆಸ್ ಅಧಿವೇಶನ ಏಪ್ರಿಲ್ ತಿಂಗಳಿನಲ್ಲಿ ಸೇರುವುದೆಂದು ಪಂಡಿತರಿಗೆ ಮೊದಲೇ ಸ್ನೇಹಿತರು ತಿಳಿಸಿದ್ದರಿಂದ ಕಮಲಾರವರ ಸಂಗಡ ಚರ್ಚಿಸಿದ್ದರು. ಕಮಲಾರವರನ್ನು ಅಂತಹ ಸ್ಥಿತಿಯಲ್ಲಿ ಬಿಟ್ಟು ಭಾರತಕ್ಕೆ ಹೊರಡುವುದೇ ಅಥವಾ ಕಾಂಗ್ರೆಸ್ ಅಧ್ಯಕ್ಷತೆಗೆ ರಾಜೀನಾಮೆ ಕೊಡುವುದೇ

ಎಂಬ ಸಮಸ್ಯೆ ಬಗೆಹರಿಯಲಾರದಾಗಿತ್ತು. ಜವಹರರು ರಾಜೀನಾಮೆ ಕೊಡಲು ಕಮಲಾ ಒಡಂಬಡಲಿಲ್ಲ. ಭಾರತಕ್ಕೆ ಹೋಗಿ ಎರಡು ತಿಂಗಳಲ್ಲಿ ಪುನಃ ವಾಪಸು ಬರುವ ಯೋಚನೆ ಮಾಡಿದರು. ಜನವರಿ ತಿಂಗಳಿನಲ್ಲಿ ಬೇಡೆವೇಲರ್ ಆರೋಗ್ಯಧಾಮ ಬಿಟ್ಟು ಸ್ವಿಟ್ಜರ್ಲೆಂಡಿನ ಲಾಸನೆ ಆರೋಗ್ಯ ಧಾಮಕ್ಕೆ ತೆರಳಿದರು.

ಸ್ವಿಟ್ಜರ್ಲೆಂಡಿಗೆ ಬದಲಾಯಿಸಿದ್ದು ಆಹ್ಲಾದಕರವಾಗಿತ್ತು. ಆದರೂ ಕಮಲಾರವರ ದೇಹಸ್ಥಿತಿ ನಿಧಾನವಾಗಿ ಉತ್ತಮಗೊಳ್ಳುತ್ತ ನಡೆದಿತ್ತು. ಏರೂ ಇರಲಿಲ್ಲ; ಇಳಿಮುಖವೂ ಇರಲಿಲ್ಲ. ಏತನ್ಮಧ್ಯೆ ಭಾರತದ ಸ್ನೇಹಿತರು ಪಂಡಿತರನ್ನು ಭಾರತಕ್ಕೆ ಬರುವಂತೆ ಒತ್ತಾಯಿಸುತ್ತಿದ್ದರು. ಕಮಲಾರವರ ಜೊತೆಗೆ ಈ ವಿಷಯ ಚರ್ಚಿಸಿ, ಕೊನೆಗೆ ವೈದ್ಯರ ಅಭಿಪ್ರಾಯದ ಮೇಲೆ ಕೆ. ಎಲ್. ಎಂ. ಡಚ್ ವಿಮಾನದ ಮೂಲಕ ಭಾರತಕ್ಕೆ ಹೊರಡಲು ಫೆಬ್ರುವರಿ ೨೮ನೇ ತಾರೀಖನ್ನು ಗೊತ್ತುಮಾಡಿದರು. ಇದೆಲ್ಲ ವ್ಯವಸ್ಥೆಗಳ ನಂತರ ಕಮಲಾ, ಜವಹರರ ಭಾರತದ ಪ್ರಯಾಣವನ್ನು ಇಚ್ಛಿಸಿದಂತೆ ತೋರ ಲಿಲ್ಲ. ಆದರೆ ಪ್ರಯಾಣ ಬದಲಿಸಲು ಆಕೆ ಹೇಳಲಿಲ್ಲ; ಇಷ್ಟಪಡಲೂ ಇಲ್ಲ.

ಜವಹರರ ಪ್ರಯಾಣಕ್ಕೆ ಇನ್ನೂ ಐದು ದಿನಗಳಿತ್ತು. ಮಗಳು ಇಂದಿರಾ ಬೊನ್ಸ್‌ನಲ್ಲಿ ಶಾಲೆಯಲ್ಲಿ ಓದುತ್ತಿದ್ದವಳು ತಾಯಿಯ ಭೇಟಿಗೆಂದು ಬಂದಿದ್ದಳು. ಇದ್ದಕ್ಕಿದ್ದ ಹಾಗೆಯೇ ವೈದ್ಯರು ಬಂದು, ಪಂಡಿತರು ಹತ್ತು ದಿನಗಳ ವರೆಗೆ ಪ್ರಯಾಣ ಮುಂದುವರಿಸಬೇಕೆಂದು ಸೂಚನೆಯಿತ್ತರು. ಹೆಚ್ಚು ಹೇಳುವ ಸ್ಥಿತಿ ವೈದ್ಯರಿಗೂ ಇರಲಿಲ್ಲ.

## ಸ್ವರ್ಗವಾಸಿ ಕಮಲಾ ನೆಹರು

ಕೊನೆಯ ದಿನಗಳು ಬಂದೇ ಬಿಟ್ಟವು. ಪರಿಸ್ಥಿತಿ ಬಿಗಡಾಯಿಸಿ ಕೊಂಡಿತು. ದೇಹಾರೋಗ್ಯ ಹಾಗೆಯೇ ಇತ್ತು. ಆಕಡೆ ಹೆಚ್ಚು ಲಕ್ಷ

ಕೊಡಲು ಆಕೆ ನಿರಾಕರಿಸುತ್ತಿದ್ದರು. ಯಾರೋ ಬಂದು ಆಕೆಯನ್ನು ಕರೆ ಯುತ್ತಿದ್ದಂತೆಯೂ, ಆಕೆಯಿದ್ದ ಕೊಠಡಿಗೆ ಯಾರೋ ಪ್ರವೇಶಿಸಿದಂತೆಯೂ ಆಕೆಗೆ ಭಾಸವಾಗುತ್ತಿತ್ತು.

ಫೆಬ್ರುವರಿ ೨೮ನೇ ತಾರೀಖು ಕಮಲಾರವರು ಕಣ್ಮುಚ್ಚಿದರು; ಪುನಃ ತೆರೆಯಲಿಲ್ಲ. ಇಂದಿರಾ ಮತ್ತು ಈ ಕಷ್ಟವಾದ ತಿಂಗಳುಗಳಲ್ಲಿ ಅವರೊಂದಿಗೆ ಇದ್ದ, ನಂಬಿಗೆಯ ಗೆಳೆಯರಾದ ಡಾಕ್ಟರ್ ಎಂ. ಅತುಲರವರು ಅವರ ಬಳಿಯಲ್ಲಿಯೇ ಇದ್ದರು.

ಸ್ವಿಟ್ಜರ್ಲೆಂಡಿನ ಇತರ ನಗರಗಳಿಂದ ಅನೇಕ ಸ್ನೇಹಿತರು ಸಹಾಯಕ್ಕೆ ಬಂದರು. ಲಾಸನೆಯ ಸ್ಮಶಾನಭೂಮಿಯಲ್ಲಿ ಆಕೆಯ ದಹನವಾಯಿತು. ಯಾವಾಗಲೂ ಧೈರ್ಯದಿಂದ ಮುಗುಳುನಗೆ ನಗುತ್ತಿದ್ದ ಆಕೆಯ ಮುಖ, ಕೋಮಲವಾದ ಆಕೆಯ ಶರೀರ, ಕ್ಷಣಕಾಲದಲ್ಲಿ ಬೂದಿಯಾಗಿಬಿಟ್ಟಿತು. ತುಂಬು ಜೀವನದ, ಬಾಳ ಬೆಳಕಾದ, ಶ್ರೇಷ್ಠ ವ್ಯಕ್ತಿಯ ಅವಶೇಷಗಳು ಒಂದು ಚಿಕ್ಕ ಪೆಟ್ಟಿಗೆಯಲ್ಲಿ ತುಂಬಲ್ಪಟ್ಟುವು.

ಜವಹರಲಾಲರು ಪವಿತ್ರವಾದ ಕಮಲಾನೆಹರುರವರ ಅವಶೇಷ ಗಳೊಂದಿಗೆ ವಿಮಾನದಲ್ಲಿ ಬಂದರು, ಒಬ್ಬರೇ ಬಂದರು, ಬರಿಗೈಯಲ್ಲಿ ಬಂದರು; ರಾಷ್ಟ್ರಪತಿಯಾಗಿ ಭಾರತಕ್ಕೆ ಬಂದರು, ಸೀತಾಪುರದಲ್ಲಿರುವ ಬಮ್‌ರೌಲಿ ಸ್ಟೇಷನ್ನಿನಲ್ಲಿ ಕಮಲಾರವರ ಸಹೋದರ ಕೈಲಾಸನಾಥರು ಜವಹರರನ್ನು ಸ್ವಾಗತಿಸಲು ಕಾದಿದ್ದರು. ದಾರಿಯುದ್ದಕ್ಕೂ ಜವಹರರಿಗೆ ಸ್ವಾಗತವಾಯಿತು. ಆ ಸ್ವಾಗತದಲ್ಲಿ ಅವರ ಹೃದಯಕ್ಕೆ ಸಂತೈಸುವ ಆತ್ಮೀಯತೆ ಇತ್ತು. ಕಡಲ ಒಡಲನ್ನು ಹಾದು ಮಿಂಚಿನಂತೆ ಕಮಲಾ ನೆಹರು ತೀರಿಕೊಂಡ ಸುದ್ದಿ ಭಾರತಕ್ಕೆ ಮೊದಲೇ ತಿಳಿದಿತ್ತು.

ಜವಹರರು ಅಲಹಾಬಾದಿಗೆ ಬಂದರು. ಜೊತೆಗೆ ಬುಟ್ಟಿಯಲ್ಲಿ ಕಮಲಾರವರ ಅವಶೇಷವನ್ನು ತಂದಿದ್ದರು. ಅದನ್ನು ಮೆರವಣಿಗೆಯಲ್ಲಿ ಗಂಗಾ ನದಿಗೆ ತೆಗೆದುಕೊಂಡು ಹೋಗಲಾಯಿತು. ಸುಮಾರು ೧ ಲಕ್ಷ ಜನ ಸೇರಿದ್ದರು. ಗಂಗಾ ನದಿ ಸಮೀಪಿಸಿತ್ತು, ಜವಹರರು ಅವಶೇಷಗಳನ್ನು

ತುಂಬಿದ್ದ ಬುಟ್ಟಿಯನ್ನು ನೋಡಿ, ಎದೆಗವಚಿಕೊಂಡರು; ಕಣ್ಣೀರು ದಳದಳನೆ ಸುರಿಯಲಾರಂಭಿಸಿತು. ಗಂಗಾ ನದಿಯ ತ್ರಿವೇಣಿಯ ಸಂಗಮದಲ್ಲಿ ಕಮಲಾರವರ ಅವಶೇಷಗಳನ್ನು ಜವಹರರು ಅರ್ಪಿಸಿದರು; ಕೊನೆಯದಾಗಿ ಕಮಲಾರವರದೆಂದಿದ್ದ ಎಲ್ಲವೂ ನದಿಯಲ್ಲಿ ತೇಲಿಹೋಯಿತು. ಗಂಗೆ ತನ್ನ ಮಡಲಲ್ಲಿ ಕಮಲಾರವರನ್ನು ಹಾಕಿಕೊಂಡು ಪಯಾಣ ಮಾಡಿಬಿಟ್ಟಳು.

ಮಹಮದಾಲಿ ಪಾರ್ಕಿನಲ್ಲಿ ಸಾರ್ವಜನಿಕ ಸಭೆ ಸೇರಿತ್ತು. ಪಂಡಿತ ಮದನಮೋಹನ ಮಾಳವೀಯರು ಅಧ್ಯಕ್ಷತೆ ವಹಿಸಿದ್ದರು. ಶ್ರೀ ಕಮಲಾ ನೆಹರುರವರ ಗುಣಗಾನ ಮಾಡಲಾಯಿತು. ಇಡೀ ಭಾರತ ಕಮಲಾರವರ ಸಾವಿಗೆ ನೊಂದು ಕಣ್ಣೀರಿಟ್ಟಿತು. ರಾಷ್ಟ್ರರತ್ನವೊಂದು ಕಳಚಿಹೋಯಿತು. ಕಮಲಾನೆಹರುರವರು ಸತ್ತು ಸ್ವರ್ಗವನ್ನು ಸೇರಿದರು. ಧನ್ಯೆ ಕಮಲಾ ನೆಹರು !

# ಕಮಲಾ ಸ್ಮಾರಕ

ಕಮಲಾನೆಹರುರವರ ಜ್ಞಾಪಕಾರ್ಥವಾಗಿ ಒಂದು ಸ್ಮಾರಕವನ್ನು ಏರ್ಪಡಿಸಿದರು. ನಿಧಿ ಸಂಗ್ರಹವಾಯಿತು. ಆಕೆಯ ಹೆಸರಿನಲ್ಲಿ "ಕಮಲಾ ನೆಹರು ಆಸ್ಪತ್ರೆ" ಎಂದು ಒಂದು ದೊಡ್ಡ ಆಸ್ಪತ್ರೆಯನ್ನು ಕಟ್ಟಲಾಯಿತು. ಆ ಆಸ್ಪತ್ರೆಯನ್ನು ಇನ್ನೂ ಬೆಳೆಸುವುದಕ್ಕಾಗಿ ಮೊನ್ನೆ ಪುನಃ ನಿಧಿಯನ್ನು ಕೂಡಿಸಿದರು. ಪಂಡಿತ ಜವಹರಲಾಲನೆಹರು ಅಹಮದ್ ನಗರದ ಸೆರೆ ಮನೆಯಿಂದ ಬಿಡುಗಡೆಯಾದ ನಂತರ ಅವರಿಗೆ ರಾಷ್ಟ್ರದ ನಿಧಿಯನ್ನು ಕಮಲಾನೆಹರು ಆಸ್ಪತ್ರೆಗಾಗಿ ಅರ್ಪಿಸಲಾಯಿತು. ಇದರಲ್ಲಿ ವಿದ್ಯಾರ್ಥಿಗಳ ಕಾಣಿಕೆಯೇ ಹೆಚ್ಚು.

ಪಂಡಿತ ಜವಹರಲಾಲರ ಹುಟ್ಟುಹಬ್ಬದ ಹೊತ್ತಿಗೆ ಈ ನಿಧಿಯನ್ನು ಕೂಡಿಸಬೇಕೆಂದು ತೀರ್ಮಾನವಾಯಿತು. ಭಾರತದ ಒಳಗೂ ಹೊರಗೂ

ಈ ನಿಧಿಯನ್ನು ಶೇಖರಿಸಲಾಯಿತು. ಲಂಡನ್ನಿನಲ್ಲಿ ಕೂಲಿಕಾರ ನಾಯಕ ರಾದ ಶ್ರೀ ಆರ್. ಸೊರೆನ್ಸೆನರವರ ಅಧ್ಯಕ್ಷತೆಯಲ್ಲಿ ಸಮಿತಿ ರಚಿಸಲ್ಪಟ್ಟಿತು. ಶ್ರೀ ಕೃಷ್ಣ ಮೆನನ್ ಇದರ ಸೂತ್ರಧಾರಿಗಳಾಗಿದ್ದರು. ಭಾರತದಲ್ಲಿ ಅಖಿಲ ಭಾರತ ಮಹಿಳಾ ಪರಿಷತ್ತಿನ ಅಧ್ಯಕ್ಷಿಣಿಯರಾದ ಕರ್ನಾಟಕದ ಕಮಲಾ ದೇವಿಯವರ ಅಧ್ಯಕ್ಷತೆಯಲ್ಲಿ ನಿಧಿಶೇಖರಣಾಸಮಿತಿಯು ಏರ್ಪಾಡಾಯಿತು. ಮಿಂಚಿನ ವೇಗದಲ್ಲಿ ಕಮಲಾದೇವಿಯವರು ದೇಶವನ್ನೆಲ್ಲಾ ಸುತ್ತಾಡಿ ಹಣವನ್ನು ಕೂಡಿಸಿದರು.

ಮಹಾತ್ಮ ಗಾಂಧಿಯವರು ಈ ರಾಷ್ಟ್ರನಿಧಿಗೆ ಬೆಂಬಲ ಕೊಡುತ್ತಾ, 'ನಿಮ್ಮ ಕೆಲಸದಲ್ಲಿ ಹರಸುವ ಅವಶ್ಯಕತೆ ಏನಿದೆ? ಅದರಲ್ಲಿ ನನ್ನ ಹೃದಯವೇ ಇದೆ; ಮತ್ತು ಅದರಲ್ಲಿ ನಾನೇ ಎಲ್ಲಾ ಆಗಿದ್ದೇನೆ' ಎಂದು ಹರಸಿದರು.

ರಾಷ್ಟ್ರಪತಿ ಮೌಲಾನಾ ಅಬುಲ್ ಕಲಂ ಅಜಾದರು ಸೆರೆಮನೆಯಿಂದ ಬಿಟ್ಟು ಬಂದ ಕೂಡಲೇ ಒಂದು ಹೇಳಿಕೆ ಹೊರಡಿಸಿ ರಾಷ್ಟ್ರನಿಧಿ ಅರ್ಪಣೆ ಯನ್ನು ಶ್ಲಾಘಿಸಿದರು. "ಪಂಡಿತ ನೆಹರುರವರಿಗೆ ರಾಷ್ಟ್ರನಿಧಿಯನ್ನು ಅರ್ಪಿಸಲು ಯೋಚಿಸಿ ವ್ಯವಸ್ಥೆ ಮಾಡಿದವರಿಗೆ ನಾನು ಅನೇಕ ವಂದನೆ ಗಳನ್ನು ಅರ್ಪಿಸುತ್ತೇನೆ. ಹೆಂಗಸರು ಮತ್ತು ಮಕ್ಕಳಿಗಾಗಿ ಕಟ್ಟಲ್ಪಡು ತ್ತಿರುವ ಆಸ್ಪತ್ರೆಗೆ ಈ ನಿಧಿಯನ್ನು ಕೊಡುವ ಆಲೋಚನೆ ಮಾಡಿರುವುದು ತುಂಬಾ ಯೋಗ್ಯವಾದುದು. ಪಂಡಿತ ಜವಹರಲಾಲರಿಗೆ ರಾಷ್ಟ್ರಸೇವೆಗೆ ಮೀಸಲಾಗಿದ್ದ, ಶ್ರೀಮತಿ ಕಮಲಾನೆಹರು ಯೋಗ್ಯ ಗೆಳತಿಯಾಗಿದ್ದರು. ಸಾಯುವ ವರೆಗೂ ನೆಹರು ಜತೆಯಲ್ಲಿ ಸ್ವಾತಂತ್ರ್ಯಸೇವೆಯಲ್ಲಿ ನಿರತಳಾಗಿ ಸಹಾಯಮಾಡಿದರು. ಈ ಆಸ್ಪತ್ರೆಗಿಂತ ಒಳ್ಳೆಯ ರೀತಿಯ ಸ್ಮರಣೆಯು ಇನ್ನಾವುದಿದೆ? ಬಹಳ ಕಾಲ ಸೆರೆಮನೆಯ ವಾಸ ಅನುಭವಿಸಿ ಹೊರಗೆ ಬಂದ ಪಂಡಿತ ಜವಹರಲಾಲರಿಗೆ ಈ ನಿಧಿ ಅರ್ಪಿಸುವುದಕ್ಕಿಂತ ಇನ್ನಾವ ಸ್ವಾಗತ ಸರಿಸಮನಾದೀತು?"

ಈ ನಿಧಿ ಸಮರ್ಪಣೆಯ ಅಧ್ಯಕ್ಷಿಣಿಯರಾದ ಶ್ರೀಮತಿ ಕಮಲಾದೇವಿ ಈ ರೀತಿ ಹೇಳಿದರು: "ಈ ನಿಧಿ ಶೇಖರಿಸುವ ಸಮಿತಿಯ ಅಧ್ಯಕ್ಷಳಾಗಿ ನಾನು, ಪಂಡಿತ ಜವಹರಲಾಲರಿಗೆ ಅರ್ಪಿಸುವ 'ಭಾಗ್ಯನಿಧಿಗೆ ಒಡವರು

ಶ್ರೀಮಂತರು ಎಂಬ ಭೇದವಿಲ್ಲದೆ ಎಲ್ಲರೂ ಸಹಾಯ ಮಾಡಬೇಕೆಂದು ಕೋರುತ್ತೇನೆ. ಈ ನಿಧಿಯನ್ನು ಕೂಡಿಸುವುದರಲ್ಲಿ ಎರಡರ್ಥವಿದೆ. ದೇಶದ ಚಳುವಳಿಯ ಸೂತ್ರ ವಹಿಸಿಕೊಳ್ಳಲು ನಾಯಕರ ಬಿಡುಗಡೆಯ ಪ್ರತೀಕ ವಾಗಿ ಈ ನಿಧಿಯನ್ನು ಜವಹರಲಾಲರಿಗೆ ಅರ್ಪಿಸಲಾಗುವುದು. ಈ ಸಂದರ್ಭದಲ್ಲಿ ಕೂಡಿದ ಹಣವನ್ನು ಕಮಲಾನೆಹರು ಆಸ್ಪತ್ರೆಯ ಅಭಿವೃದ್ಧಿ ಗಾಗಿ ವಿನಿಯೋಗಿಸಲ್ಪಡುವುದು. ಈ ಸಂಸ್ಥೆಯು ಹೆಂಗಸರು ಮಕ್ಕಳಿಗಾಗಿ ಹೆಂಗಸರಿಂದಲೇ ನಡೆಯಿಸಲ್ಪಟ್ಟಿದೆ. ರೋಗಿಗಳನ್ನು ಮುಫತ್ತಾಗಿ ಉಪ ಚಾರ ಮಾಡಲಾಗುತ್ತಿದೆ. ೧೯೪೧ರಲ್ಲಿ ಗಾಂಧಿಜೀಯವರಿಂದ ಆಸ್ಪತ್ರೆಯ ಪ್ರಾರಂಭೋತ್ಸವ ನೆರವೇರಿತು. ಈಗ ಈ ಆಸ್ಪತ್ರೆಯ ಸಲಕರಣೆಗಳನ್ನು ಒದಗಿಸಲು ಮತ್ತು ಹೆಚ್ಚು ರೋಗಿಗಳಿಗೆ ಸ್ಥಳ ಕೊಡಲು ಹತ್ತು ಲಕ್ಷ ರೂಪಾಯಿಗಳಾದರೂ ಬೇಕು.

" ಈ ಆವಶ್ಯಕತೆಗಳನ್ನು ಸಂಪೂರ್ಣವಾಗಿ, ಈ ದಂಪತಿಗಳ ರಾಷ್ಟ್ರ ಸೇವೆಯನ್ನು ಮೆಚ್ಚಿ ಅವರ ಹೆಸರಿನಲ್ಲಿ ಈ ನಿಧಿಯನ್ನು ಕೂಡಿಸಲಾಗಿತ್ತಿ. ಕಮಲಾ ಮತ್ತು ಜವಹರಲಾಲರಿಗೆ ಮನುಷ್ಯಮಾತ್ರದವರಿಗೆ ಇರಬೇಕಾಗಿದ್ದ ಎಲ್ಲ ಸುಖಸೌಲಭ್ಯಗಳು ಇದ್ದುವು. ಐಶ್ವರ್ಯವಿತ್ತು, ಜೀವನದ ಸೌಖ್ಯ ವಿತ್ತು, ಅವರ ಆಸೆಗಳನ್ನು ತೀರಿಸಿಕೊಳ್ಳಲು ಬೇಕಾದಷ್ಟು ಅವಕಾಶವಿತ್ತು. ಆದರೂ ದೇಶದ ಕರೆ ಬಂದಾಗ ಇಬ್ಬರೂ ತಮ್ಮ ಸ್ವಾರ್ಥವನ್ನು ತ್ಯಾಗ ಮಾಡಿ. ದೇಶಸೇವೆಗಾಗಿ ಕಂಕಣಕಟ್ಟಿ ನಿಂತರು. ಭಾರತದ ಸ್ವಾತಂತ್ರ್ಯ ಅವರ ಮೊದಲ ಮತ್ತು ಕೊನೆಯ ಜೀವನದ ಗುರಿಯಾಯಿತು.

" ಕಮಲಾನೆಹರು ದೇಹಾರೋಗ್ಯವನ್ನು ಲೆಕ್ಕಿಸದೆ ಹೋರಾಟವು ಪ್ರಾರಂಭವಾದಾಗ ತನ್ನ ಸರ್ವಸ್ವವನ್ನು ಅದರಲ್ಲಿ ಮಿಲನಮಾಡಿ ಹೊಸ ಸತ್ಯಾಗ್ರಹಿಯ ಹುರುಪಿನಲ್ಲಿ ಸೇರಿದರು. ಕೊನೆಗೆ ಅದೇ ಖಾಹಿಲೆಯಲ್ಲಿ ಪರಿಣಾಮವಾಯಿತು. ಅಂಥ ಶ್ರೇಷ್ಠ ವ್ಯಕ್ತಿಯ ಸ್ಮರಣೆಯು ಈ ಆಸ್ಪತ್ರೆಗೆ ಸಹಾಯ ಮಾಡುವುದರ ಮೂಲಕ ಯೋಗ್ಯವಾದೀತು.

" ನಮ್ಮ ಕೆಲಸವನ್ನು ಹರಸುತ್ತಾ ಮಹಾತ್ಮ ಗಾಂಧಿಯವರು 'ನನ್ನ ಹೃದಯವೇ ಅದರಲ್ಲಿದೆ' ಎಂದಿದ್ದಾರೆ. ಈಗ ನಾನು ಬೇಡುತ್ತಿರುವುದು

ನಿಮ್ಮಗಳ ಹೃದಯವು ಅದರಲ್ಲಿ ಸೇರಲೆಂದು. ನಿಮ್ಮ ಕಾಣಿಕೆ ನಮಗೆ ಬೇಕು; ಅದು ಚಿಕ್ಕದಾಗಲಿ, ದೊಡ್ಡದಾಗಲಿ, ರಾಷ್ಟ್ರೀಯ ಸ್ಮಾರಕಕ್ಕೆ ಉಳಿದ ಜವಹರಲಾಲ್, ಅಳಿದ ಕಮಲಾ ಜ್ಞಾಪಕಕ್ಕೆ ಗೌರವಪೂರ್ವಕ ವಾಗಿ ಕೊಡಿ. ಭಾರತ, ಇಂಗ್ಲೆಂಡ್, ಅಮೇರಿಕಾ ಮತ್ತು ಹೊರಗಿರುವ ಭಾರತದ ಸ್ನೇಹಿತರು, ಈ ನಿಧಿಗೆ ಸಹಾಯಮಾಡುವುದರ ಮೂಲಕ ವೀರ ಜವಹರಲಾಲ್, ಧೀರೆ ಕಮಲಾ ಇವರ ತ್ಯಾಗ ಸೇವೆಯ ಪ್ರತೀಕವಾಗಿ ಕೂಡಿಸಬೇಕೆಂದು ಪ್ರಾರ್ಥಿಸುತ್ತೇನೆ. ”

————

# ಸರೋಜಿನಿ ನಾಯ್ಡು

"ಓ! ಸೇನಾಪತಿ! ಎಲ್ಲಿರುವೆ! ಸೈನಿಕರಿರಾ, ಬನ್ನಿ! ಸ್ವಾತಂತ್ರ್ಯ ಸಂಗ್ರಾಮದಲ್ಲಿ ಹೆದರಿ ಬೆನ್ನು ತೋರಿಸುವುದು ಅಕ್ಷಮ್ಯ ಅಪರಾಧ. ನಿರಾಶೆ ಯಂತಹ ಭಯಂಕರ ಪಾಪ ಮತ್ತೊಂದಿಲ್ಲ. ನಾನೊಬ್ಬ ಸ್ತ್ರೀ; ಬರಿಯ ಕವಯಿತ್ರಿ ಮಾತ್ರ. ಸ್ತ್ರೀಯಾಗಿ ನಾನು ನಂಬಿಕೆಯನ್ನು ಹುಟ್ಟಿಸಬಲ್ಲೆ; ಧೈರ್ಯವನ್ನು ತುಂಬಬಲ್ಲೆ; ಮನಸ್ಥೈರ್ಯವೆಂಬ ಗುರಾಣಿಯುಳ್ಳಿದ್ದ ರಕ್ತ ಕವಚವನ್ನು ತೊಡಿಸಬಲ್ಲೆ; ಈ ಧರ್ಮಯುದ್ಧದಲ್ಲಿ ಅವೇ ನಮ್ಮಾಯುಧಗಳು. ಕವಿಯಾಗಿ ರಣರಂಗದಲ್ಲಿ ಸ್ವಾತಂತ್ರ್ಯ ಕಹಳೆಯನ್ನೂದಿ ಸ್ವರಾಜ್ಯಗೀತೆಯನ್ನು ಹಾಡುವೆ. ಗುಲಾಮಗಿರಿಯಿಂದ ನಿಶ್ಚೇಷ್ಟವಾಗಿ ಮಲಗಿರುವ 'ಗಂಡಸ'ರನ್ನು ಯಾವ ಕಿಡಿಯಿಂದ ಹೊತ್ತಿಸಿ ರೊಚ್ಚಿಗೆಬ್ಬಿಸಿ ಕಾರ್ಯೋನ್ಮುಖರನ್ನಾಗಿ ಮಾಡಲಿ!"

ಈ ರೀತಿ ರಣಕಹಳೆ ಕೂಗುತ್ತ ಸರೋಜಿನಿದೇವಿ ಕಾಂಗ್ರೆಸ್ಸಿನ ರಥದ ಸೂತ್ರಗಳನ್ನು ವಹಿಸಿಕೊಂಡರು. ಸಮುದ್ರದಾಚೆಯಿಂದ ಭಾರತದ ಕೋಗಿಲೆ ಮುಕ್ತಕಂಠದಿಂದ ಸ್ವಾತಂತ್ರ್ಯದ ನಾಂದಿಯನ್ನು ಹಾಡಿದರು. ಸಂಸ್ಕೃತಿಗೆ ಹೆಸರಾದದ್ದೆಂದು ಹೇಳಿಕೊಂಡ ಪಾಶ್ಚಾತ್ಯದೇಶವು, ಸರೋಜಿನಿದೇವಿಯನ್ನು ಶ್ರೇಷ್ಠ ಕವಿಗಳ ಶ್ರೇಣಿಯಲ್ಲಿ ಸೇರಿಸಿಕೊಂಡು ಕೊಂಡಾಡಿತು. ತನ್ನ ಸುಮಧುರವಾದ ಕಂಠದಿಂದ ಭಾರತಸಂಸ್ಕೃತಿಯ ಹಿರಿಮೆಯನ್ನು ಗಂಭೀರ ವಾದ ರೀತಿಯಲ್ಲಿ ಪಾಶ್ಚಿಮಾತ್ಯರಿಗೆ ಅರಿವು ಮಾಡಿಕೊಟ್ಟ ಕೀರ್ತಿಕಳಶವು ಸರೋಜಿನಿಗೆ. ಭಾರತದ ಒಂದು ಪರ್ವಕಾಲದಲ್ಲಿ ಜನಿಸಿದ ಸರೋಜಿನಿಯು ತನ್ನ ಕೋಕಿಲಗಾನದಿಂದ ಸ್ವಾತಂತ್ರ್ಯದ ಹಾಡನ್ನು ಸಮುದ್ರದಾಚೆಯಿಂದ

ಹಾಡಿದರು. ಒಕ್ಕೊರಲಿನಿಂದ ಮಹಿಳೆಯರ ನಾಯಕಿಯಾಗಿ, ಹಿಂದೂ ಸ್ಥಾನದ ದಾಸ್ಯಶೃಂಖಲೆಯನ್ನು ಬಿಡಿಸಲು ಮುಡಿಕಟ್ಟಿ, ಸೆರಗು ಬೀಸಿ, ಕಾರ್ಯರಂಗಕ್ಕೆ ಧುಮುಕಿದರು.

ಸರೋಜಿನಿ ಭಾರತದಲ್ಲಿ ಇನ್ನೊಂದು ಕಾಲದಲ್ಲಿ ಹುಟ್ಟಿದ್ದರೆ, ತನ್ನ ಮೃದುಮಧುರ ಕಂಠದಿಂದ, ಕಾವ್ಯಸಾಮ್ರಾಜ್ಯದ ಚಕ್ರವರ್ತಿನಿಯಾಗಿ ಸಾಹಿತ್ಯದ ಸುಗ್ಗಿಯನ್ನು ಸೂರೆಮಾಡುತ್ತಾ, ಹಿಂದೂಸ್ಥಾನ, ಏಕೆ ಇಡೀ ಪ್ರಪಂಚದಲ್ಲೆಲ್ಲಾ ಕಾವ್ಯಗಾಯನ ಮಾಡುತ್ತಾ ಭಾರತದ ವಿರಾಟ್‌ಸ್ವರೂಪ ವನ್ನು ಪ್ರಪಂಚದ ಕಣ್ಣಮುಂದೆ ತರುತ್ತಿದ್ದರೋ ಏನೋ! ಆದರೆ ಭಾರತದ ದಾಸ್ಯ ಬಿಡಿಸಲು ಮಹಿಳೆಯರನ್ನು ಚೇತನಗೊಳಿಸಿ ಸ್ವಾತಂತ್ರ್ಯಸಂಗ್ರಾಮಕ್ಕೆ ಅಣಿಮಾಡುವ ಕೆಲಸದ ದೊಡ್ಡ ಜವಾಬ್ದಾರಿ, ಕಾದು ಕುಳಿತಿತ್ತು. ಸ್ವತಂತ್ರ ವಾತಾವರಣದಲ್ಲಿ ಕಾವ್ಯಸುಧೆಯನ್ನು ಸವಿದ ಸರೋಜಿನಿದೇವಿ, ಪರದಾಸ್ಯದ ಆಳ್ವಿಕೆಯನ್ನು ಸಹಿಸಲಾರದೆ, ಕಾವ್ಯಪ್ರಪಂಚವನ್ನು ಬದಿಗಿರಿಸಿ ಕಲ್ಲು ಮುಳ್ಳುಗಳಿಂದಾವೃತವಾದ ರಾಜಕೀಯ ಆಂದೋಳನದಲ್ಲಿ ಪ್ರವೇಶಿಸಿದರು.

ಭಾರತದ ರಾಜಕಾರಣವನ್ನು ವಿಶ್ವದ ದೃಷ್ಟಿಯಿಂದ, ಅಂತರ್ರಾಷ್ಟ್ರೀಯ ವಾಗಿ ಯೋಚಿಸತಕ್ಕವರಲ್ಲಿ ಸರೋಜಿನಿದೇವಿ ಒಬ್ಬಾಕೆ. ಸರೋಜಿನಿಯ ರಾಷ್ಟ್ರೀಯತೆ, ಅಂತರ್ರಾಷ್ಟ್ರೀಯತೆಯಲ್ಲಿ ಮಿಲನವಾಗಿದೆ. ಭಾರತದ ಪ್ರಾಚೀನ ಸಂಸ್ಕೃತಿಯೊಂದಿಗೆ, ಪಾಶ್ಚಾತ್ಯದೇಶಗಳ ನವನಾಗರಿಕತೆಯನ್ನು ಸೇರಿಸಿ ನವಭಾರತದ ಶ್ರೇಷ್ಠ ಸಂಸ್ಕೃತಿಯ ಬೆಳವಣಿಗೆಯನ್ನು ಸರೋಜಿನಿ ಕಂಡುಕೊಂಡಿದ್ದಾರೆ. ಭಾರತದಲ್ಲಿ ಕಂದಾಚಾರ ಪದ್ಧತಿಯನ್ನೇ ಮುಂದು ಮಾಡಿಕೊಂಡು ಅಭಿವೃದ್ಧಿಯನ್ನು ತಡೆಹಿಡಿದವರನ್ನು ಧೈರ್ಯದಿಂದ ಎದುರಿಸಿ ಪ್ರಪಂಚದ ನಾನಾ ಹೊಂದಾಣಿಕೆಯಲ್ಲಿ ಹಿರಿಮೆಯನ್ನೂ ಹಾಗೂ ಹೊಸದನ್ನೂ ಕಂಡಕೊಳ್ಳಲು ಆಕೆ ಪ್ರಯತ್ನಿಸಿದಷ್ಟು ಮತ್ತಾರೂ ಪ್ರಯತ್ನಿ ಸಿರಲಿಕ್ಕಿಲ್ಲ. ಭಾರತ ತನ್ನ ಪ್ರಾಚೀನ ವೈಭವದ ಜೊತೆಗೆ ಇತರ ದೇಶಗಳ ರಾಜಕೀಯ, ವೈಜ್ಞಾನಿಕ, ಸಾಂಸ್ಕೃತಿಕ ಮತ್ತು ಸಾಮಾಜಿಕ ಪ್ರತಿಭೆ ಪ್ರಭಾವಗಳನ್ನು ಹೊಂದಿ ಅಭಿವೃದ್ಧಿಗೆ ಬರಬೇಕೆಂಬುದೇ ಆಕೆಯ ಮತ.

ಸರೋಜಿನಿಯ ಕಾರ್ಯದಕ್ಷತೆ, ಪ್ರಾಮಾಣಿಕತನ, ಮತ್ತು ಬುದ್ಧಿ ವಂತಿಕೆಯ ಫಲವಾಗಿ, ನಾಯಕತ್ವವು ತನಗೆತಾನೇ ಮನೆಯ ಬಾಗಿಲಿಗೆ

ಬಂದಿತು. ೧೯೨೫ನೇ ಇಸ್ವಿಯಲ್ಲಿ ಕಾನ್‌ಪುರದಲ್ಲಿ ನಡೆದ ಅಖಿಲ ಭಾರತ ಕಾಂಗ್ರೆಸ್ ಮಹಾಧಿವೇಶನದ ಅಧ್ಯಕ್ಷಿಣಿಯಾಗಿ ಗೌರವಾನ್ವಿತರಾದರು. ಭಾರತದಲ್ಲಿ ಇದಕ್ಕಿಂತ ಹೆಚ್ಚಿನ ಗೌರವವೇನಿದೆ! ಅಧ್ಯಕ್ಷಪದವಿಯಿಂದ ಸ್ವಾತಂತ್ರ್ಯದ ಕಹಳೆ ಊದಿದರು. ಕೂಗಲಿಲ್ಲ; ಹಾಡಿದರು. ಆಕೆಯ ಕಂಠಸ್ವರ— ಹೃದಯದ ಹಂಬಲ,—ಜನತೆಯ ಹೃದಯವನ್ನು ನೇರವಾಗಿ ಹೊಕ್ಕಿತು; ಅಂತಃಕರಣವನ್ನು ಕಲಕಿತು. ಅಂದಿನಿಂದ ಅವರು ಉತ್ತರ ಪ್ರದೇಶದ ಗೌರ್ನರ್ ಆಗುವ ವರೆಗೆ ಸರೋಜಿನಿ ಅಖಿಲ ಭಾರತ ಕಾಂಗ್ರೆಸ್ ಕಾರ್ಯಕಾರಿ ಸಮಿತಿಯ ಏಕಮಾತ್ರ ಮಹಿಳಾ ಸದಸ್ಯರಾಗಿ ದೇಶಸೇವೆ ಸಲ್ಲಿಸುತ್ತಿದ್ದರು. ಭಾರತದ ಮಹಿಳೆಯರ ಏಕಮೇವ ನಾಯಕಿಯಾಗಿ ಸ್ವಾತಂತ್ರ್ಯದೇವಿಯ ಗರ್ಭಗುಡಿಯಲ್ಲಿ ಆರಾಧನೆ ಗೈಯುತ್ತಿರುವ ಅರ್ಚಕರೊಂದಿಗೆ ಆರತಿ ಎತ್ತಿದರು.

## ಮಾತಾಪಿತೃಗಳು

ಶ್ರೀ ಅಘೋರನಾಥ ಚಟ್ಟೋಪಾಧ್ಯಾಯ ಮತ್ತು ಶ್ರೀಮತಿ ವರದ ಸುಂದರಾದೇವಿಯವರ ಮಗಳಾಗಿ ಸರೋಜಿನಿ ಚಟ್ಟೋಪಾಧ್ಯಾಯರು ೧೮೭೯ನೇ ಇಸ್ವಿ ೧೩ನೇ ತಾರೀಖು ಜನ್ಮವೆತ್ತಿದರು. ಅಘೋರನಾಥರು ಬಂಗಾಳಾ ದೇಶದ ಬ್ರಹ್ಮನಗರದ ಚಟರ್ಜಿ ವಂಶಕ್ಕೆ ಸೇರಿದವರು. ಶ್ರೇಷ್ಠ ತರಗತಿಯ ಅನುಕೂಲಸ್ಥ ಬ್ರಾಹ್ಮಣ ವಂಶ ಅವರ ಮನೆತನ. ಸಾವಿರಾರು ವರ್ಷಗಳಿಂದ ಅವರ ಮನೆತನ, ಸಂಸ್ಕೃತ ಮತ್ತು ವೇದಾಂತ ಪಾಂಡಿತ್ಯಕ್ಕೆ ಹೆಸರುವಾಸಿ. ಹಿಂದೂಶಾಸ್ತ್ರ, ವೇದ, ಗೀತೆ, ಇವುಗಳಲ್ಲಿ ಏನು ತೊಡಕು ಬಂದರೂ ಅದಕ್ಕೆ ಸಮರ್ಪಕವಾದ ಉತ್ತರ ದೊರೆಯುತ್ತಿದ್ದುದು ಚಟರ್ಜಿಯವರ ಮನೆತನದಲ್ಲೇ. ಈ ಮನೆತನ ತಲೆಮಾರಿನಿಂದಲೂ ಪಾಂಡಿತ್ಯದ ತವರುಮನೆಯಾಗಿತ್ತು.

ಡಾ|| ಅಘೋರನಾಥರೂ ಕೂಡಾ ಪ್ರತಿಭಾಶಾಲಿಗಳಾಗಿ ಪಾಂಡಿತ್ಯ ಪಡೆದಿದ್ದರು. ದಯಾವಂತರು, ಕರುಣಿಗಳು; ಎಂತಹ ಕಷ್ಟದ ಸಂದರ್ಭ

ದಲ್ಲಿಯೂ ಮನಸ್ಸನ್ನು ಸಡಿಲಬಿಟ್ಟು ಅವಿವೇಕದ ತೀರ್ಮಾನವನ್ನು ತೆಗೆದು ಕೊಳ್ಳುತ್ತಿರಲಿಲ್ಲ. ಸ್ವಾರ್ಥವಾಗಲೀ, ಕೋಪವಾಗಲೀ ಅವರ ಹತ್ತಿರ ಸುಳಿಯುತ್ತಿರಲಿಲ್ಲ. ಹಿಂದಿನ ಕಾಲದ ಋಷಿಗಳಂತೆ ಸತ್ಯಾನ್ವೇಷಣೆಯಲ್ಲಿ ತೊಡಗಿ ಅನೇಕ ಸವಿ ಕನಸುಗಳನ್ನು ಕಾಣುತ್ತಿದ್ದರು. ಎಷ್ಟು ಮೇಲ್ತರ ಗತಿಯ ಮೇಧಾವಿಗಳಾದರೂ ಅವರ ಸ್ವಭಾವ ಮಕ್ಕಳಂತೆ. ಮನಸ್ಸೂ ಹಾಗೆಯೇ. ತೊಂದರೆ ಕೊಡುವ ಅಥವಾ ಕೆಡುಕುಮಾಡುವ ಸ್ವಭಾವವೇ ಅವರದಲ್ಲ. ಆದರೂ ಯಾವಾಗಲೂ ಅವರು ಗಂಭೀರವಾದ ಮತ್ತು ಗಹನವಾದ ವಿಚಾರದಲ್ಲಿಯೇ ತಲ್ಲೀನರಾಗಿರುತ್ತಿದ್ದರು. ನಗು ಅವರಿಗೆ ದೇವರು ಕೊಟ್ಟ ವರ. ಹುಟ್ಟುತ್ತಲೇ ಪ್ರಪಂಚವನ್ನು ನಗುತ್ತ ನೋಡಿದರು. ಸರೋಜಿನಿದೇವಿ, ತಂದೆಯ ವಿಚಾರವಾಗಿ ಬರೆಯುತ್ತಾ "ನಮ್ಮ ತಂದೆ ಸ್ವತಃ ಕನಸುಗಾರರು. ಅವರು ಶ್ರೇಷ್ಠವಾದ ಕನಸುಗಳನ್ನೇ ಕಾಣುತ್ತಾರೆ. ಬಾಳನ್ನು ಬೆಳಗಿಸಿಕೊಳ್ಳದ ದೊಡ್ಡ ಮನುಷ್ಯ ಅವರು. ಭಾರತದಲ್ಲಿ ಅವರಂತಿದ್ದ ವಿದ್ವಾಂಸರು ಕಡಿಮೆ. ಅವರಂತೆ ಅಂತಃಕರಣವುಳ್ಳವರೂ ಸ್ವಲ್ಪ. ಅವರಿಗೆ ಹಿರಿದಾದ ಬಿಳಿಯ ಗಡ್ಡವಿದೆ; ಹೋಮರನಂತೆ ಅವರ ವ್ಯಕ್ತಿತ್ವ; ಯಾವಾಗಲೂ ನಗುತ್ತಲೇ ಇರುತ್ತಾರೆ; ಮನೆ ಕುಸಿದುಬೀಳುವಂತೆ ನಗುತ್ತಾರೆ. ಅವರು ಸಂಪಾದಿಸಿದ ಹಣವನ್ನೆಲ್ಲಾ ತಮ್ಮ ಜೀವನದ ಎರಡು ಕೆಲಸಗಳ ಮೇಲೆ ಧಾರಾಳವಾಗಿ ವೆಚ್ಚಮಾಡಿದ್ದಾರೆ; ದಾನಮಾಡಿದ್ದಾರೆ. ರಸತಂತ್ರ ವಿದ್ಯೆಯಲ್ಲಿ ಹೆಚ್ಚಿನ ಜ್ಞಾನ ಸಂಪಾದಿಸುವುದು, ಬಡವರಿಗೆ ಧನ ಸಹಾಯ ಮಾಡುವುದು, ಅಘೋರನಾಥರ ನಿತ್ಯಕರ್ಮ. ಅವರ ಉದ್ಯಾನ ವನವು ಸರ್ವಜನದ ಪ್ರತಿನಿಧಿ ಸಭೆ. ಪಂಡಿತರು, ಧರ್ಮಜ್ಞಾನಿಗಳು, ಅನ್ಯಮತಾನ್ವೇಷಿಗಳು, ರಾಜರು, ಭಿಕ್ಷುಕರು, ಸನ್ಯಾಸಿಗಳು, ಹಾಗೂ ಉಚ್ಚೋದ್ಯೋಗಾರರು ಒಟ್ಟಾಗಿ ನೆರೆಯುವ ಸ್ಥಳವದು. ಹಗಲೆಲ್ಲಾ ಇಂತಹ ಸಭೆಗಳಾದರೆ, ರಾತ್ರಿಯೆಲ್ಲಾ ರಸತಂತ್ರ ಪ್ರಯೋಗಗಳು. ರಸತಂತ್ರದಲ್ಲಿ ಹೊಸ ಪ್ರಯೋಗ ಕಂಡುಹಿಡಿದವರನ್ನು ಮಾನಿಸಿ, ಅವರನ್ನು ಸಹೋದರ ರನ್ನಾಗಿ ಮಾಡಿಕೊಂಡು ಅವರಿಗೆ ಆಶ್ರಯಕೊಡುತ್ತಿದ್ದರು.

ಅವರ ವಂಶಸ್ಥರಂತೆ, ಡಾ|| ಅಘೋರನಾಥರು ಸಂಸ್ಕೃತ ಮತ್ತು ಹಿಂದೂಶಾಸ್ತ್ರದ ಜ್ಞಾನದಲ್ಲಿ ತೃಪ್ತಿಪಡೆಯಲಿಲ್ಲ. ಹೆಚ್ಚಿನ ಜ್ಞಾನಸಂಪಾದನೆ

ಪಡೆಯಲೋಸುಗ ಯೂರೋಪಿಗೆ ತೆರಳಿದರು. ಎಡಿ೯ಬರೋ ಮತ್ತು ಜರ್ಮನಿಯ ಬಾರ್ನ ವಿಶ್ವವಿದ್ಯಾನಿಲಯಗಳಲ್ಲಿ 'ಡಾಕ್ಟರ್ ಆಫ್ ಸೈನ್ಸ್' ಪದವಿಯನ್ನು ಗಳಿಸಿದರು. ಭಾರತಕ್ಕೆ ಮರಳಿ ಬಂದನಂತರ ಹೈದ್ರಾಬಾದ್ ಸಂಸ್ಥಾನದಲ್ಲಿ ನೆಲಸಿ, ನೈಜಾಂ ಕಾಲೇಜೊಂದನ್ನು ಸ್ಥಾಪಿಸಿ ಅದರ ಪ್ರಥಮ ಪ್ರಿನ್ಸಿಪಾಲರಾದರು. ವಿದ್ಯಾಭ್ಯಾಸ ಮತ್ತು ವೈಜ್ಞಾನಿಕ ಸಂಶೋಧನೆ ಅವರ ಜೀವನದ ಮುಖ್ಯ ಗುರಿಗಳಾದುವು.

ಸರೋಜಿನಿಯ ತಾಯಿ ವರದ ಸುಂದರಾದೇವಿಯು ಮಹಾಸಾಧ್ವಿ. ಮಕ್ಕಳ ಮನಸ್ಸನ್ನು ಚೆನ್ನಾಗಿ ಅರಿತ ತಾಯಿ ಆಕೆ. ಒಂದು ಕಡೆ ತಾಯಿಯ ಮಮತೆಯನ್ನು ತೋರಿಸಿ, ಅಕ್ಕರೆಯಿಂದ ಸಾಕಿದರೆ, ಮತ್ತೊಂದು ಕಡೆ ಮಕ್ಕಳು ತಮ್ಮ ಅಭಿಪ್ರಾಯಸ್ವಾತಂತ್ರ್ಯ ಬೆಳೆಸಿಕೊಳ್ಳಲು ಅನುವುಮಾಡಿ ಕೊಳ್ಳುತ್ತಿದ್ದರು. ಮಕ್ಕಳ ವಿದ್ಯಾಭ್ಯಾಸದ ವಿಷಯದಲ್ಲಿ ಆಕೆಗೆ ಆಸಕ್ತಿ ಜಾಸ್ತಿ ಇತ್ತು. ಮಕ್ಕಳು ಯಾವುದಾದರೂ ಒಂದು ವಿಷಯದಲ್ಲಿ ಹೆಚ್ಚಿನ ಪಾಂಡಿತ್ಯ ಪಡೆಯಬೇಕೆಂಬುದೇ ಆಕೆಯ ಸದಾಶಯವಾಗಿತ್ತು. ತನ್ನ ಮಕ್ಕಳ ಬುದ್ಧಿಶಕ್ತಿಯ ಕಡೆಗೆ ಲಕ್ಷ್ಯಕೊಟ್ಟು ಅವರವರ ಇಷ್ಟಕ್ಕನುಸಾರವಾಗಿ ವಿದ್ಯೆ ಕಲಿಯಲು ಏರ್ಪಾಡುಗಳನ್ನು ಮಾಡಿದರು. ಒಬ್ಬರಿಗೆ ಸಂಗೀತವಿದ್ಯೆ ಮತ್ತೊಬ್ಬರಿಗೆ ಕಾವ್ಯಸಾಧನೆ, ಮಗದೊಬ್ಬರಿಗೆ ಚಿತ್ರಕಲೆ. ಚಿಕ್ಕಂದಿನಲ್ಲಿ ತಾವೇ ಕವಯಿತ್ರಿಯಾಗಿ ಬಂಗಾಳಿ ಭಾಷೆಯಲ್ಲಿ ಅನೇಕ ಸುಂದರ ಕವನ ಗಳನ್ನು ಬರೆದಿದ್ದರು. ತಾಯಿಯ ಕಾವ್ಯಸ್ಫೂರ್ತಿಯನ್ನು ಸರೋಜಿನಿದೇವಿ ಪಡೆದುಕೊಂಡದ್ದು ಆಶ್ಚರ್ಯವೇನೂ ಅಲ್ಲ.

## ಬಾಲ್ಯ ಜೀವನ

ಸರೋಜಿನಿದೇವಿಯ ಬಾಲ್ಯಜೀವನವು ಈ ವಾತಾವರಣದ ಮಧ್ಯೆ ನಾಗಾಲೋಟದಿಂದ ಸಾಗಿತ್ತು. ತಂದೆಯಲ್ಲಿ ಸೌಂದರ್ಯಾಭಿಲಾಷೆ ಮತ್ತು ಪವಿತ್ರ ಕಾರ್ಯಗಳಲ್ಲಿ ಆಸಕ್ತಿಯನ್ನು ಕಂಡುಕೊಂಡರೆ, ತಾಯಿಯಲ್ಲಿ ನಮ್ರತೆ ಮತ್ತು ವಿನಯಶೀಲತೆಯನ್ನು ಆರಿಸಿಕೊಂಡರು. ಚಿಕ್ಕ ವಯಸ್ಸಿ

ನಲ್ಲಿಯೇ ಅನೇಕ ರೀತಿಯ ಜನರನ್ನು ಭೇಟಿಮಾಡಿ ಪ್ರಪಂಚದ ರೀತಿನೀತಿ ಗಳನ್ನು ತಿಳಿದುಕೊಂಡಿದ್ದರು. ಮನೆಯಲ್ಲಿ ಮೊದಲಿನಿಂದಲೂ ಸ್ವತಂತ್ರ ವಾತಾವರಣ ಸಿಕ್ಕಿದ್ದು, ಮುಂದೆ ಸರೋಜಿನಿ ಸ್ವಾತಂತ್ರ್ಯ ಸಮರದಲ್ಲಿ ಬೀಳಲು ಅನುಕೂಲವಾಯಿತು.

ಸರೋಜಿನಿಗೆ ವಿದ್ಯಾಭ್ಯಾಸ ಬಹು ಚಿಕ್ಕ ವಯಸ್ಸಿನಲ್ಲಿಯೇ ಪ್ರಾರಂಭ ವಾಯಿತು. ಸರೋಜಿನಿ ಇಂಗ್ಲಿಷ್ ವಿದ್ಯೆಯನ್ನು ಚೆನ್ನಾಗಿ ಕಲಿಯಬೇಕೆಂದು ಆಕೆಯ ತಂದೆ ಆಶಿಸಿದ್ದರು. ಸರೋಜಿನಿಗೆ ಅದು ಅಷ್ಟು ಇಷ್ಟವಿರಲಿಲ್ಲ. ಒಂದು ದಿನ ಇಂಗ್ಲಿಷ್ ಭಾಷೆಯಲ್ಲಿ ಆಸಕ್ತಿ ಹುಟ್ಟಿಸಲು ಆಕೆಯನ್ನು ಒಂದು ಕೊಠಡಿಯಲ್ಲಿ ಹಾಕಿ ಬೀಗ ಹಾಕಿದರು. ಈ ಶಿಕ್ಷೆಯೇನೋ ಫಲಕೊಟ್ಟಿತು. ಸರೋಜಿನಿ ಕೊಠಡಿಯಿಂದ ಹೊರಬಂದಾಗ ಇಂಗ್ಲಿಷಿನಲ್ಲಿ ಒಂದೇ ಅಲ್ಲ, ಇತರ ಭಾಷೆಗಳನ್ನು ಕಲಿಯಲು ಕೂಡಾ ಆಸಕ್ತಿ ತೋರಿಸಿದರು. ಮನೆಯಲ್ಲಿ ಸಂಭಾಷಣೆ ಇಂಗ್ಲಿಷಿನಲ್ಲಿಯೇ ನಡೆಯುತ್ತಿತ್ತು. ಇಂಗ್ಲಿಷಿನಲ್ಲಿ ತಂದೆಯ ಕೂಡ ಮಾತನಾಡುವಾಗ ಒಂದು ಚಿಕ್ಕ ತಪ್ಪು ಮಾಡಿದ್ದಕ್ಕಾಗಿ ಧಂಡಿಯಾಗಿ ಶಿಕ್ಷೆಗೊಳಗಾಗಿದ್ದರು. ತಾಯಿ ಮಾತ್ರ ಯಾವಾಗಲೂ ಹಿಂದೂಸ್ಥಾನಿ ಯಲ್ಲಿಯೇ ಮಾತನಾಡಿಸುತ್ತಿದ್ದರು. ಸರೋಜಿನಿಗೆ ಆಗ ಆರು ವರ್ಷ ಮಾತ್ರ.

ಸರೋಜಿನಿ ಒಬ್ಬ ಸುಪ್ರಸಿದ್ಧ ವಿಜ್ಞಾನಿಯೋ ಇಲ್ಲವೆ ಗಣಿತಶಾಸ್ತ್ರ ಪರಿಣತಳೋ ಆಗಬೇಕೆಂದು ಆಕೆಯ ತಂದೆ ನೆನೆಸಿದ್ದರು. ಸರೋಜಿನಿಗೆ ಮಾತ್ರ ಗಣಿತದ ಗುಣಾಕಾರವೂ ಇಷ್ಟವಿದ್ದಿಲ್ಲ, ಪ್ರಯೋಗದ ನವೀನತೆಯೂ ರುಚಿಸಲಿಲ್ಲ. ತಂದೆಯ ಆಜ್ಞೆಯನ್ನು ಮೀರಲಾರದೆ ಅಭ್ಯಾಸ ಮಾತ್ರ ಕೈಗೊಂಡಿದ್ದರು. ಸರೋಜಿನಿ ಆಗಲೇ ಕಾವ್ಯದೇವಿಯ ಆರಾಧಕರಾಗಿದ್ದರು. ಹೊಸ ಪ್ರಪಂಚದ ಕನಸೊಂದನ್ನು ಕಾಣುತ್ತ, ಬೇರೊಂದು ಸಾಮ್ರಾಜ್ಯದ ಪ್ರಜೆಯಾಗಿ ಆಲೆದಾಡಲು ಹವಣಿಸುತ್ತಿದ್ದರು. ಹನ್ನೊಂದನೆಯ ವರ್ಷವು ತುಂಬಿದಾಗ ಮೊಟ್ಟಮೊದಲನೆ ಕವನವನ್ನು ರಚಿಸಿದರು. ಕಾವ್ಯಾರಾಧನೆ ಅಂದಿನಿಂದ ಪ್ರಾರಂಭವಾಯಿತು. ಆಗ ಪದ್ಯ ಬರೆದ ಸಂದರ್ಭವು ಬಹಳ ಚಮತ್ಕಾರವಿದೆ.

ಒಂದು ದಿನ ಬೀಜಗಣಿತದ ಒಂದು ಲೆಕ್ಕವನ್ನು ಬಿಡಿಸುತ್ತ ಕುಳಿತಿದ್ದರು. ಎಷ್ಟು ತಲೆ ಕೆರೆದುಕೊಂಡರೂ ಆ ಲೆಕ್ಕ ಬಿಡಿಸುವುದಾಗಲಿಲ್ಲ. ಆ ಲೆಕ್ಕ

ಬಿಡಿಸುತ್ತಿರುವಾಗ ಮನಸ್ಸಿನಲ್ಲಿ ಒಂದು ಪದ್ಯವನ್ನು ಹೆಣೆದರು. ಅದನ್ನು ಹಾಗೆಯೇ ಬರೆದರು. ೧೩ನೇ ವರ್ಷದಲ್ಲಿ ಸರ್ ವಾಲ್ಟರ್ ಸ್ಕಾಟ್ ಬರೆದಂತೆ ಉದ್ದವಾದ 'ದಿ ಲೇಡಿ ಆಫ್ ದಿ ಲೇಕ್' ಎಂಬ ಕವನವನ್ನು ರಚಿಸಿದರು. ನಂತರ ಎರಡು ಸಾವಿರ ಸಾಲಿನ ಒಂದು ನಾಟಕವನ್ನು ಬರೆದರು. ದೇಹ ಶ್ರಮವನ್ನು ಲೆಕ್ಕಿಸದೆ, ವೈದ್ಯರ ಆಜ್ಞೆಯ ವಿರುದ್ಧ ಅದನ್ನು ಬರೆದು, ಪರಿಣಾಮವಾಗಿ ಖಾಹಿಲೆ ಬಿದ್ದರು. ಸರೋಜಿನಿ ಆರೀತಿ ಹಗಲು ರಾತ್ರಿ ಕೆಲಸಮಾಡುತ್ತಿದ್ದುದರಿಂದ ವೈದ್ಯರು ಆಕೆಗೆ ಓದಲು ಬರೆಯಲು ಅನುಮತಿ ಕೊಡಲಿಲ್ಲ. ಆದರೆ ಸರೋಜಿನಿ ವೈದ್ಯರ ಮಾತನ್ನು ಲೆಕ್ಕಿಸದೆ ತನ್ನ ಆರೋಗ್ಯವನ್ನು ಕೆಡಿಸಿಕೊಂಡು ಶಾಲೆಗೆ ಹೋಗದಷ್ಟು ಕೂಡ ನಿತ್ರಾಣ ರಾದರು. ಖಾಹಿಲೆಯಲ್ಲಿರುವಾಗಲೂ ಸುಮ್ಮನೆ ಕೂಡಲಿಲ್ಲ. ಒಂದು ಕಾದಂಬರಿಯನ್ನು ಬರೆದರು. ದಿನಚರಿಯೊಂದನ್ನಿಟ್ಟು ತಮ್ಮ ನಿತ್ಯ ಜೀವನದ ನಡವಳಿಕೆಯನ್ನು ಬರೆಯಲಾರಂಭಿಸಿದರು.

ಸರೋಜಿನಿದೇವಿ ತಮ್ಮ ಹನ್ನೆರಡನೆಯ ವಯಸ್ಸಿನಲ್ಲಿಯೇ ಮದ್ರಾಸ್ ವಿಶ್ವವಿದ್ಯಾನಿಲಯದ ಮ್ಯಾಟ್ರಿಕ್ಯುಲೇಷನ್ ಪರೀಕ್ಷೆಯಲ್ಲಿ ತೇರ್ಗಡೆ ಹೊಂದಿ ದರು. ಆಗಿನ ಕಾಲಕ್ಕೆ ಅದು ಹೆಮ್ಮೆಯ ಮಾತಾಗಿತ್ತು. ಎಲ್ಲರೂ ಆಕೆ ಯನ್ನು ಅಭಿನಂದಿಸಿದರು. ಅದರಿಂದ ಆಕೆ ಗರ್ವಪಡದೆ, ಶಾಲೆ ಮತ್ತು ಕಾಲೇಜು ಅಭ್ಯಾಸದಲ್ಲಿ ಆಸಕ್ತಿ ತೋರಿಸದೆ, ಪದವಿ, ಡಿಪ್ಲೊಮಗಳ ಹಂಬಲವಿಲ್ಲದೆ ತನ್ನದೇ ಆದ ರೀತಿಯಲ್ಲಿ ವಿದ್ಯೆಯನ್ನು ಕಲಿಯಬೇಕೆಂದು ಇಚ್ಛಿಸಿದರು. ಪದ್ಯ ಬರೆಯುವುದರಲ್ಲಿ ತಮ್ಮ ನಿಜವಾದ ಸ್ಥಾನವಿದೆಯೆಂದೂ, ಪರೀಕ್ಷೆಗಳಲ್ಲಿ ತೇರ್ಗಡೆಹೊಂದುವುದರಿಂದ ಏನೂ ಸಾರ್ಥಕ್ಯವಿಲ್ಲವೆಂದೂ ಆಕೆ ನಿರ್ಧರಿಸಿದ್ದರು.

ಸರೋಜಿನಿ ತಮ್ಮ ಭವಿತವ್ಯನ್ನು ಒಂದು ರೀತಿಯಲ್ಲಿ ಕೆತ್ತಿಕೊಳ್ಳಲು ನಿರ್ಧರಿಸಿದರೆ, ಆಕೆಯ ತಂದೆ ಬೇರೆ ರೀತಿಯಲ್ಲಿ ಯೋಚಿಸುತ್ತಿದ್ದರು. ಸರೋಜಿನಿಗೆ ಆಗ ೧೬ ವರ್ಷ. ಸರೋಜಿನಿ ಪ್ರೇಮನಗರದಲ್ಲಿ ಕಾಲಿಟ್ಟು ಶ್ರೀ ಗೋವಿಂದರಾಜುಲು ನಾಯ್ಡು ಎಂಬ ಅಂತರ್ಜಾತೀಯ ಯುವಕನನ್ನು ಮದುವೆಯಾಗಲು ಮನಸ್ಸು ಮಾಡಿದರು. ತಂದೆತಾಯಿಯರು ಈಕೆಯ

ಮಾರಿಯನ್ನು ಒಪ್ಪಲಿಲ್ಲ. ಆಕೆಯ ಮನಸ್ಸನ್ನು ಬೇರೆಕಡೆ ತಿರುಗಿಸಲು, ಸಂಸ್ಥಾನದಿಂದ ವಿದ್ಯಾರ್ಥಿ ವೇತನಕೊಟ್ಟು ಮುಂದಿನ ವಿದ್ಯಾಭ್ಯಾಸಕ್ಕಾಗಿ ಯೂರೋಪಿಗೆ ಕಳುಹಿಸಲು ಏರ್ಪಾಡು ಮಾಡಿದರು.

## ವಿದ್ಯಾಭ್ಯಾಸ

೧೮೯೫ರಲ್ಲಿ ಸರೋಜಿನಿದೇವಿ ಸಮುದ್ರ ದಾಟಿದರು. ಲಂಡನ್ ಪಟ್ಟಣದಲ್ಲಿನ ಸುಪ್ರಸಿದ್ಧವಾದ ಕಿಂಗ್ಸ್ ಕಾಲೇಜನ್ನು ಸೇರಿದರು. ನಂತರ ಕೇಂಬ್ರಿಡ್ಜ್ ವಿಶ್ವವಿದ್ಯಾನಿಲಯದ ಹೆಸರಾದ ಮಹಿಳಾ ಕಾಲೇಜು ಗರ್ಟ್ ಕಾಲೇಜನ್ನು ಸೇರಿದರು. ಸರೋಜಿನಿ ಇಂಗ್ಲೆಂಡಿನಲ್ಲಿ ಓದುಬರಹ ಇವೆರಡ ರಲ್ಲಿಯೇ ಮಗ್ನರಾಗಿರಲಿಲ್ಲ. ಅಲ್ಲಿಯ ಜನ ಜೀವನ, ನಾಗರೀಕತೆ, ಸಂಸ್ಕೃತಿ ಮುಂತಾದುವುಗಳನ್ನು ಚೆನ್ನಾಗಿ ಅಭ್ಯಾಸಮಾಡಿದರು. ಶ್ರೀ ಎಡ್‌ಮಂಡ್ ಗಾಸ್ ಎಂಬ ಹೆಸರಾಂತ ವಿಮರ್ಶಕ, ಕವಿ, ಗ್ರಂಥಕರ್ತ, ಸರೋಜಿನಿಯ ಬುದ್ಧಿ ಸಾಮರ್ಥ್ಯ, ನಡತೆ, ಸೌಜನ್ಯ ಪ್ರತಿಭೆಗಳಿಗೆ ಬೆರಗಾಗಿ ಆಕೆಯ ಸಖ್ಯ ಬೆಳೆಯಿಸಿ, ಸರೋಜಿನಿ ಬೆಳಕಿಗೆ ಬರಲು ಸಹಾಯನಾದ. ಆಂಗ್ಲ ಮಹಿಳೆಯರಲ್ಲಿಲ್ಲದ ಅನೇಕ ಗುಣಗಳನ್ನು ಈಕೆಯಲ್ಲಿ ಕಂಡುಕೊಂಡ. ಭಾರತೀ ಸಂಸ್ಕೃತಿಯ ಮೂರ್ತಿಮತ್ತಾದ ಸರೋಜಿನಿ, ಗಾಸ್‌ನ ದೃಷ್ಟಿಯನ್ನು ಸೆಳೆದು, ಆಂಗ್ಲರು ಭಾರತದಕಡೆ ನೋಡುವಂತೆ ಮಾಡಿದರು. ಚಿಕ್ಕ ವಯಸ್ಸಿನಲ್ಲಿಯೇ ಅಂಥ ಅಗಾಧವಾದ ಪಾಂಡಿತ್ಯವನ್ನು ಪಡೆದ ಸರೋಜಿನಿ ಯನ್ನು ಮೆಚ್ಚಿ ಆಕೆಯಲ್ಲಿ ಅಡಗಿಕೊಂಡಿದ್ದ ಮೇಧಾಶಕ್ತಿಯನ್ನು ಹೊರ ಗೆಡಹಲು ಮನಸ್ಸು ಮಾಡಿದ.

ಸರೋಜಿನಿ ಇಂಗ್ಲಿಷಿನಲ್ಲಿ ಕವನಗಳನ್ನು ರಚಿಸುತ್ತಿದ್ದುದನ್ನು ಕೇಳಿ ಗಾಸ್‌ನಿಗೆ ಬಲು ಆನಂದವಾಯಿತು. ಆಕೆಯ ಕೆಲವು ಕವನಗಳನ್ನು ತರಿಸಿ ಓದಿದನು. ಗಾಸ್‌ನಿಗೆ ಸಂತೋಷವೊಂದು ಕಡೆ; ನಿರಾಶೆಯೊಂದು ಕಡೆ. ಸರೋಜಿನಿಗೆ ಇಂಗ್ಲಿಷ್ ಭಾಷೆಯಲ್ಲಿ ಆಗಲೇ ಬೇಕಾದಷ್ಟು ಪಾಂಡಿತ್ಯವಿತ್ತು ಪದ್ಯಗಳ ಧಾಟಿ, ಪ್ರಾಸ ಎಲ್ಲವೂ ಸರಿಯಿತ್ತು. ಆದರೆ ಆಕೆ ಆರಿಸಿಕೊಂಡ

ಪದ್ಯಗಳ ವಸ್ತುಗಳೆಲ್ಲಾ ಇಂಗ್ಲೆಂಡ್ ದೇಶಕ್ಕೆ ಸಂಬಂಧಿಸಿದ್ದಿತ್ತು. ಆಂಗ್ಲೇಯ ಮಹಿಳೆಯೊಬ್ಬಳಿಂದ ಇಂಗ್ಲಿಷ್ ಜನರಿಗಾಗಿ ಅವು ಬರೆಯಲ್ಪಟ್ಟದ್ದರೆ, ಅವೊಂದು ಇಂಗ್ಲಿಷ್ ಸಾಹಿತ್ಯದಲ್ಲಿ ಶ್ರೇಷ್ಠ ಸಾಹಿತ್ಯವಾಗಿ ಪರಿಣಮಿಸುತ್ತಿತ್ತು. ಪುರಾತನವಾದ ಪೂರ್ವದೇಶದ ಸಂಸ್ಕೃತಿಯ ಗಂಧದ ಲವಲೇಶವೂ ಇರಲಿಲ್ಲ. ಇದನ್ನು ಕಂಡು ಗಾಸ್‌ನಿಗೆ ನಿರಾಶೆಯಾಯಿತು. ಸರೋಜಿನಿಯಂತಹ ಕವಿಯಿತ್ರಿ, ಭಾರತ ದೇಶದ ಜನ, ಅಲ್ಲಿಯ ಪ್ರಕೃತಿಸೌಂದರ್ಯ, ನಾಗರಿಕತೆ ಮುಂತಾದ ವಿಷಯಗಳನ್ನು ಪದ್ಯವಸ್ತುಗಳಾಗಿಟ್ಟುಕೊಂಡು ಕವನ ರಚಿಸ ಬೇಕೆಂದು ಸರೋಜಿನಿಗೆ ಸಲಹೆಯಿತ್ತನು. ಭಾರತೀಯಳಾಗಿ ಭಾರತೀಯರ ವಿಷಯವಾಗಿ ಬರೆದು, ಪ್ರಪಂಚಕ್ಕೆ ಭಾರತದ ಸಂಸ್ಕೃತಿಯ ಅರಿವನ್ನುಂಟು ಮಾಡಬೇಕೆಂದು ಕೋರಿದನು.

ಈ ಬುದ್ಧಿವಾದ ಸರೋಜಿನಿಗೆ ಹಿಡಿಸಿತು. ಭಾರತಭೂಮಿ ಆಕೆಯ ಕಾವ್ಯರಾಜ್ಯವಾಯಿತು. ಸುಂದರವಾದ, ಶ್ರೇಷ್ಠವಾದ ಮತ್ತು ಅತ್ಯುತ್ತಮ ಕವನಗಳನ್ನು ಬರೆದರು. ಮೂರು ಕವನ ಸಂಗ್ರಹಗಳು ಪ್ರಕಟವಾದುವು. ೧೯೦೫ರಲ್ಲಿ 'ದಿ ಗೋಲ್ಡನ್ ಥ್ರೆಷೋಲ್ಡ್' ಎಂಬ ಕವನಸಂಗ್ರಹವೂ, ೧೯೧೨ರಲ್ಲಿ 'ದಿ ಬರ್ಡ್ ಆಫ್ ಟೈಂ', ೧೯೧೭ರಲ್ಲಿ 'ದಿ ಬ್ರೋಕನ್ ವಿಂಗ್' ಎಂಬ ಕವನ ಸಂಗ್ರಹಗಳೂ, ಎಡ್‌ಮಂಡ್ ಗಾಸ್‌ನ ಒತ್ತಾಯದಿಂದ ಪ್ರಕಟವಾದುವು. ಇಂಗ್ಲಿಷ್ ಸಾಹಿತ್ಯದಲ್ಲಿ ಅವು ಚಿರಸ್ಥಾಯಿ ಸಾಹಿತ್ಯ. ಮೊದಲನೆಯ ಕವನಸಂಗ್ರಹವನ್ನು ಸರೋಜಿನಿದೇವಿ ಶ್ರೀ ಗಾಸ್ ಮಹಾಶಯರವರಿಗೆ ಅರ್ಪಿಸಿದ್ದಾರೆ.

ಗಾಸ್‌ನಂತೆ ಸರೋಜಿನಿಯ ಮೇಲೆ ಪ್ರಭಾವ ಬೀರಿದಾತ ಇನ್ನೊಬ್ಬ. ಆತ ಶ್ರೀ ಆರ್ಥರ್ ಸೈಮನ್ಸ್. ಆತನೂ ಬರಹಗಾರ ಹಾಗೂ ಕವಿ. ಸರೋಜಿನಿಯ ಮೊದಲನೆಯ ಕವನ ಸಂಗ್ರಹಕ್ಕೆ ಆತನೇ ಪರಿಚಯಲೇಖನ ಬರೆದಿದ್ದಾನೆ. ಆಗಿನ ಸರೋಜಿನಿಯನ್ನು ಚೆನ್ನಾಗಿ ತಿಳಿಯಬೇಕಾದರೆ ಸೈಮನ್ಸ್‌ನು ಬರೆದ ಪರಿಚಯಲೇಖನ ಓದಬೇಕು.

ಸರೋಜಿನಿಯ ಮಾಟಾದ ವ್ಯಕ್ತಿತ್ವ, ಆಕೆಯ ಸುಂದರವಾದ, ಕಾಂತಿ ಯುತವಾದ, ಸೌಂದರ್ಯಾಭಿಲಾಷೆಯುಳ್ಳ ಕಣ್ಣುಗಳು, ಸೈಮನ್ಸ್‌ನನ್ನು ಆಕರ್ಷಿಸಿದುವು. ಪ್ರಪಂಚದ ಜ್ಞಾನವನ್ನು ಬಾಲ್ಯದಲ್ಲಿಯೇ ತಿಳಿದು

ಕೊಂಡುದನ್ನೂ, ಆಕೆ ತೆಗೆದುಕೊಳ್ಳುವ ನಿರ್ಧಾರಗಳು ತೂಕವಾಗಿರುವುದನ್ನೂ ನೋಡಿ ಸ್ಪೈಮನ್ನನು ತಲೆದೂಗಿದನು. ನಗುವಿನಂತೆ ನಿಷ್ಕಪಟ ಹೃದಯದ ಸರೋಜಿನಿ, ನಾಚಿಕೆಯಿಂದ ಹೆಚ್ಚು ಮಾತಿಲ್ಲದೆ, ಸದ್ದಿಲ್ಲದ ರಸಘಟ್ಟವೆಂದು ಮನನಮಾಡಿಕೊಂಡನು. ಸರೋಜಿನಿಯಲ್ಲಿ ಮಾತೇ ಕಡಿಮೆ. ಆಡಿದ ಮಾತುಗಳು ಅಣಿಮುತ್ತುಗಳು. ಗುಣಗಂಭೀರ, ಮನಸ್ಸು ಯಾವಾಗಲೂ ಶಾಂತತೆಯಿಂದ ಕೂಡಿರುತ್ತಿತ್ತು. ಹೊಲಸು, ಕೊಳೆ, ಆಕೆಯ ಬಳಿಯಲ್ಲಿ ಸುಳಿದಾಡುತ್ತಲೇ ಇರಲಿಲ್ಲ. ದೇಹಶ್ರಮ ಬಹಳವಾಗಿ ಅರೋಗಿಯಾದರೂ ಮನಸ್ಸಿನ ದೃಢತೆಯನ್ನು ಕೆಡಿಸಿಕೊಳ್ಳುತ್ತಿರಲಿಲ್ಲ. ಆಕೆ ಎಲ್ಲರಿಗಿಂತ ಹೆಚ್ಚಾಗಿ ಎಲ್ಲ ಕವಿಗಳಂತೆ ಸುಖದುಃಖ ಜೊತೆಯಾಗಿ ಅನುಭವಿಸುತ್ತಿದ್ದರು. ಈ ಗುಣ ವಿಲ್ಲದೆ ನಿಜವಾದ ಕವಿಯಾಗಲಾರ. ಸರೋಜಿನಿಗೆ ವಿನೋದ ಸ್ವಭಾವ ತುಂಬಾ. ಜೀವನದಲ್ಲಿ ಹಾಸ್ಯದ ಹಾಳೆಗಳೇ ಬಹಳ. ಮನಸ್ಸು ಆ ಕಡೆ ಬೇಗ ತಿರುಗುತ್ತಿತ್ತು. ಆಕೆಯೇ ಹೇಳುವಂತೆ "ಜೀವನದಲ್ಲಿ ದೇವರು ಕೊಟ್ಟಿರುವ ಎಲ್ಲ ಭಾಗ್ಯಗಳಿಗಿಂತ ನಗುವಿನ ಸಂಪತ್ತು ಮಿತಿ ಇಲ್ಲದೆ ನನಗೆ ದೇವರು ಕೊಟ್ಟಿದ್ದಾನೆ" ಎಂದು. ಸಾಯವಾಗ ಹಣ್ಣುಹಣ್ಣು ಮುದುಕಿ ಯಾಗಿದ್ದರೂ ಈ ವಿನೋದ ಸ್ವಭಾವ ಸ್ವಲ್ಪವೂ ಕಡಿಮೆಯಾಗಿರಲಿಲ್ಲ.

ಸರೋಜಿನಿ ಸುಪ್ರಸಿದ್ಧ ಕವಿಯೆಂದು ಬೇಗನೆ ಕೀರ್ತಿ ಗಳಿಸಿದರು. ಯೂರೋಪ್ ದೇಶವನ್ನೆಲ್ಲಾ ಸಂಚರಿಸುತ್ತಾ, ಪ್ರಕೃತಿಸೌಂದರ್ಯದ ನೆಲೆ ವೀಡಾದ, ಕಲಾಸೌಂದರ್ಯದ ಬೀಡಾದ ಇಟಲಿ ದೇಶವನ್ನು ಸಂದರ್ಶಿಸಿದರು. ಆ ದೇಶದ ಜನರು ಮತ್ತು ನಾಗರಿಕತೆ, ಆಕೆಯ ಮೇಲೆ ಪರಿಣಾಮವನ್ನುಂಟು ಮಾಡಿದುವು. ಇಟಲಿಯ ಪ್ರಾಚೀನ ದೇವರುಗಳಲ್ಲಿ ತಲ್ಲೀನರಾದರು. ಆಕೆಯ ಕಣ್ಣುಗಳ ಮುಂದೆ ಆ ದೇವರುಗಳೇ ಸಂಚರಿಸತೊಡಗಿದುವು. ರೋಂ ದೇಶದ ಮಠಾಧಿಪತಿಗಳು, ಬಿಷಪ್ಪರು, ಸರೋಜಿನಿಯ ಮನಸ್ಸನ್ನು ಸೆಳೆದರು. ಅವರ ಗಂಭೀರವಾದ ಮುಖಮುದ್ರೆ, ಶಾಂತ ಮನಸ್ಸು, ಕೈಗೊಂಡ ಪವಿತ್ರ ಕಾರ್ಯ ಸರೋಜಿನಿಯನ್ನು ಮೆಚ್ಚಿಸಿದುವು. ಅರಮನೆಯನ್ನು ಸಂದರ್ಶಿಸಿ, ದೇವರ ಮನೆಗಳನ್ನು ಭೇಟಿಮಾಡಿದ ಸರೋಜಿನಿದೇವಿ ಸೆರೆಮನೆಗಳಂತಿದ್ದ ಬಡವರ ಗೃಹಗಳನ್ನು, ಆ ಜನರ ಕಷ್ಟಸ್ಥಿತಿಗಳನ್ನು ಕಣ್ಣಾರೆ ಕಂಡರು. ಇಟಲಿಯ ಸಂದರ್ಶನ ಆಕೆಯ ಜೀವನದಲ್ಲಿ ಒಂದು ಮಹಾ ಘಟ್ಟ.

# ಸ್ವದೇಶಾಗಮನ

ಮೂರು ವರ್ಷಗಳ ವಿದ್ಯಾಭ್ಯಾಸದ ನಂತರ ಸರೋಜಿನಿ ೧೮೯೮ರಲ್ಲಿ ಹೈದರಾಬಾದಿಗೆ ಹಿಂದಿರುಗಿದರು. ಆಕೆ ಇಂಗ್ಲೆಂಡಿನಿಂದ ಬಂದ ಕೂಡಲೇ ಹಿಂದೆಯೇ ಗೊತ್ತುಮಾಡಿಕೊಂಡಿದ್ದ ಡಾ|| ಗೋವಿಂದರಾಜುಲು ನಾಯ್ಡು ರವರನ್ನು ಮದುವೆಯಾದರು. ಸಮಾಜದ ಬೆದರಿಕೆಯು ಅಡ್ಡ ಬಂದಿತು. ಮನೆಯ ಹಿರಿಯರು ಒಪ್ಪಲಿಲ್ಲ. ಈಕೆ ಶ್ರೇಷ್ಠ ಬ್ರಾಹ್ಮಣ ವಂಶದವರು. ಆತ ಅಬ್ರಾಹ್ಮಣ. ಪಂಡಿತ ವಂಶದ ಸರೋಜಿನಿಯು ಅಬ್ರಾಹ್ಮಣನನ್ನು ಮದುವೆಯಾಗುವುದು ಹೇಗೆ? ಪ್ರೀತಿಗೆ ಅಡ್ಡಲಾಗಿ ಬಂದ ಜಾತಿಕಟ್ಟಳೆಗಳು ಹೋಗಬೇಕೆಂದು ಸರೋಜಿನಿ ಮದುವೆಗೆ ಮುಂಚೆಯೇ ಹೋರಾಡಿದ್ದರು. ಸಮಾಜದ ಗೊಡ್ಡು ಬೆದರಿಕೆಗೆ ಹೆದರದೆ ಧೈರ್ಯದಿಂದ ಅಂತರಪ್ರಾಂತೀಯ ಹಾಗೂ ಅಂತರ್ಜಾತೀಯ ವಿವಾಹವನ್ನು ಮಾಡಿಕೊಂಡರು. ಈ ಸುಧಾರಣೆ ಸರೋಜಿನಿಯಿಂದ ಪ್ರಾರಂಭವಾಯಿತು. ಈಗ ಅನೇಕ ಈ ತೆರನಾದ ಮದುವೆಗಳು ಭಾರತದಲ್ಲಿ ನಡೆದಿವೆ. ಸರೋಜಿನಿ ಅಂದಿನಿಂದ ಕೊನೆಯ ವರೆಗೂ ಸುಖಸಂಸಾರ ಸಾಗಿಸಿಕೊಂಡು ನಡೆದರು.

ಸರೋಜಿನಿದೇವಿ ನಾಲ್ಕು ಮಕ್ಕಳನ್ನು ಪಡೆದ ಪುಣ್ಯವಂತೆ. ಗಂಡು ಸಂತಾನ ಎರಡು; ಹೆಣ್ಣುಮಕ್ಕಳು ಇಬ್ಬರು. ಆಕೆ ತನ್ನ ಮಕ್ಕಳ ಮೇಲೆ ಒಂದು ಪದ್ಯವನ್ನು ಬರೆಯುತ್ತಾ, ಸ್ವಾತಂತ್ರ್ಯಪ್ರಿಯನೂ ಮತ್ತು ಸಂಗೀತ ಪ್ರಿಯನಾಗಲು ಹರಸಿ ಮೊದಲನೆಯ ಮಗುವಿಗೆ 'ಜಯಸೂರ್ಯ'ನೆಂದು ಹೆಸರಿಟ್ಟರು. ಮಧುರ ಮಧುವಿನಿಂದ ಕೂಡಿದ ತುಂಬು ಕಮಲದಂತಿರ ಬೇಕೆಂದು ಬಯಸಿ ಎರಡನೆಯ ಮಗುವಿಗೆ 'ಪದ್ಮಜ' ಎಂದ ಕರೆದರು. ಯೋಧನಾಗಲು ಬಯಸಿ ರಣರಂಗದಲ್ಲಿ ಕಾದಲು ತಕ್ಕವನಾಗೆಂದು ತಮ್ಮ ಮೂರನೆಯ ಮಗನನ್ನು 'ರಣಧೀರ'ನೆಂದು ಘೋಷಿಸಿದರು. (ಇವರು ಬೆಂಗಳೂರಲ್ಲಿ ತೀರಿಕೊಂಡರು.) ಆನಂದಸಾಗರಳಾಗಿ ಯಾವಾಗಲೂ ನಗುಮುಖದಿಂದ ಬೆಳಗಿ, ದುಃಖದ ಸೋಂಕಿಲ್ಲದ ಜೀವನಯಾತ್ರೆಯನ್ನು ಸಾಗಿಸಬೇಕೆಂದು ಬಯಸಿ ನಾಲ್ಕನೆಯ ಮಗುವಿಗೆ 'ಲೀಲಾಮಣಿ'ಯೆಂದು ಸಂಬೋಧಿಸಿದರು.

ಹೈದರಾಬಾದಿನಲ್ಲಿ ಅನೇಕ ವರ್ಷಗಳು ಸುಖಸಂಸಾರ ನಡೆದಿತ್ತು. ಅಲ್ಲಿಯ ಸಮಾಜಜೀವನದಲ್ಲಿ ಪ್ರಮುಖ ಪಾತ್ರವನ್ನು ವಹಿಸಿದರು. ಹೊಸ ಅಭಿಪ್ರಾಯಗಳೊಂದಿಗೆ ಹಳೆಯ ಅಭಿಪ್ರಾಯಗಳನ್ನು ಹೆಣೆದು ಹೊಸದಾದ ಪ್ರಪಂಚವನ್ನು ಕಟ್ಟಲು ನೆರವಾದರು. ಆಕೆಯ ಮನೆ ಸಮಾಜ ಸುಧಾರಕರ ಕಣಜವಾಗಿತ್ತು. ಎಲ್ಲ ಮತೀಯರೂ, ಎಲ್ಲ ಅಭಿಪ್ರಾಯದವರೂ ಬಂದು ವಿಚಾರವಿನಿಮಯ ಮಾಡುತ್ತಿದ್ದರು. ಆಕೆ ಎಲ್ಲರ ಹೃದಯಗಳಲ್ಲಿಯೂ ಪ್ರೀತಿ ವಿಶ್ವಾಸಗಳನ್ನು ಗಳಿಸಿಕೊಂಡಿದ್ದರು. ಕಲಾವಂತರು, ಕವಿಗಳು, ಚಿತ್ರಕಾರರು, ಗ್ರಂಥ ಬರೆಯುವವರು, ಆಕೆಯ ಸಲಹೆ, ಬುದ್ಧಿವಾದಗಳಿಗಾಗಿ ಆಗಾಗ ಬರುತ್ತಿದ್ದರು. ಸರೋಜಿನಿ ಹೈದರಾಬಾದಿನಲ್ಲಿದ್ದುದರಿಂದಲೇ ಕಲಾ ನಿಪುಣರು ಅಲ್ಲಿ ನೆಲೆಸಲು ಅನುಕೂಲವಾಯಿತು. ಸ್ವಲ್ಪ ದಿನಗಳ ನಂತರ ಸರೋಜಿನಿನಾಯ್ಡುರವರು ಹೈದರಾಬಾದನ್ನು ಬಿಟ್ಟು ರಾಜಕೀಯ ಮತ್ತು ಸಾಮಾಜಿಕ ಆಂದೋಳನದಲ್ಲಿ ಕಾಲಿಟ್ಟರು. ಕಾವ್ಯಾರಾಧನೆ ಬದಿಗಿಟ್ಟರು. ವಿಶ್ವಕವಿ ಟಾಗೋರರು ಹೇಳಲಿಲ್ಲವೇ " ಮನೆ ಬೆಂಕಿ ಬಿದ್ದು ಉರಿಯುವಾಗ ಕವಿ ಹಾಡುವುದನ್ನು ಬಿಟ್ಟು ನೀರು ಸುರಿದು ಬೆಂಕಿ ನೊಂದಿಸಲು ಹೋಗ ಬೇಕು " ಎಂದು. ಹಿರಿಯ ಕವಿಸಾಮ್ರಾಟ ಟಾಗೋರ್ ಹೇಳಿದ ಮಾತು ಕವಿಚಕ್ರವರ್ತಿನಿ ಸರೋಜಿನಿದೇವಿ ಕಾರ್ಯತಃ ನಡೆಸಿದರು. ಇದು ಭಾರತ.

## ಭಾರತದ ಕೋಗಿಲೆ

ಸರೋಜಿನಿಯ ಕವನಗಳನ್ನು ಭಾರತ ಮತ್ತು ಆಂಗ್ಲ ಕವಿಗಳು, ವಿಮರ್ಶಕರು, ಸಾಹಿತಿಗಳು, ಮನಸಾರೆ ಮೆಚ್ಚಿ ಕೀರ್ತಿಕಳಶವಿಟ್ಟಿದ್ದಾರೆ. ಆಕೆಯನ್ನು 'ಭಾರತದ ಕೋಗಿಲೆ' ಎಂದಿದ್ದಾರೆ. ಇತರ ಭಾರತಿಯ ಕವಿ ಗಳಲ್ಲಿ ಕಂಡುಬರದ ಸೌಂದರ್ಯ ಈಕೆಯ ಕವನಗಳಲ್ಲಿದೆ ಎಂಬುದನ್ನು ಒಪ್ಪಿಕೊಂಡಿದ್ದಾರೆ. ಆಕೆ ಕವನ ಸಂಗ್ರಹಗಳನ್ನು ಪ್ರಕಟಿಸಿದ್ದು ಆಕೆಯ ಇಂಗ್ಲೀಷ್ ಗೆಳೆಯರ ಒತ್ತಾಯದ ಮೇಲೆ. ತನ್ನ ವಿಷಯವಾಗಿ ಬರೆದು ಕೊಳ್ಳುತ್ತಾ 'ನಾನು ನಿಜವಾಗಿಯೂ ಕವಿಯಲ್ಲ; ಕವಿಯಾಗಬೇಕೆಂದು

ನೆನಗಾಸೆ. ಆದರೆ ಆ ಕಾವು ನನ್ನಲ್ಲಿಲ್ಲ. ಶ್ರೇಷ್ಠವಾದ ಸುಂದರಶಕ್ತಿ ಯುಳ್ಳ ಒಂದೇ ಒಂದು ಸತ್ಯ-ಸ್ವಾತಂತ್ರ್ಯ ಕವನ ಬರೆಯಬೇಕೆಂದು ನನ್ನ ಹೆಬ್ಬಯಕೆ. ಆ ಬಯಕೆ ನಾ ಸಾಯುವುದರೊಳಗೆ ತೀರುವುದೋ ಇಲ್ಲವೋ? ಹಕ್ಕಿಗಳು ಹಾಡಿದಂತೆ ನಾ ಹಾಡುವೆ. ಅಂತೆಯೇ ನನ್ನ ಹಾಡುಗಳೂ ಹಕ್ಕಿ ಗಳಂತೆ ಅಲ್ಪಾಯುಗಳು'. ದೊಡ್ಡವರು, ಕವಿಗಳಾಗಿ ಜನರ ಹೃದಯಾಂತ ರಾಳಗಳನ್ನು ತಿಳಿದವರು ಆಡಿದ ಮಾತುಗಳವು. ತಾನು ಕವಿಯಲ್ಲವೆಂದು ಹೇಳುವುದೇ ದೊಡ್ಡಸ್ತಿಕೆ; ಜನಹೇಳಿದ್ದಾರೆ; ಪ್ರಪಂಚ ಒಪ್ಪಿದೆ. ವಿಮ ರ್ಶಕರು ಆಕೆಯ ಕವನಗಳಲ್ಲಿ, ಸರಸ ಸಂಗೀತ, ಮಾತುಗಳ ಮೇಲಿನ ಹಿಡಿತ, ವಿಷಯ ಪ್ರಾಧಾನ್ಯತೆ, ವಸ್ತುವನ್ನು ಆರಿಸಿಕೊಂಡ ವಿಧಾನಗಳನ್ನು ಕಂಡು ವಿಸ್ಮಯದಿಂದ ತಲೆದೂಗಿದ್ದಾರೆ. ಹಕ್ಕಿಗಳ ಹಾಡಿನಂತೆ ಆಕೆಯ ಹಾಡುಗಳು, ನೈಜವಾದ ಹೊಸ ಹುರುಪುಕೊಡುವ ಕೋಕಿಲಗಾನದಂತಿವೆ ಎಂದು ಒಪ್ಪಿದ್ದಾರೆ. ಆಕೆ ಪ್ರಕಟಿಸಿದ ಮೂರು ಕವನ ಸಂಗ್ರಹದಲ್ಲಿಯೂ ಈ ಗುಣಗಳನ್ನು ಕಾಣಬಹುದು. ಒಂದರಲ್ಲಿ ಪ್ರಪಂಚದಲ್ಲಿನ ಸುಖಸೌಲಭ್ಯ ಗಳ ಚಿತ್ರಗಳನ್ನು ಚಿತ್ರಿಸಿದ್ದರೆ, ಇನ್ನೊಂದರಲ್ಲಿ ದಾರುಣವಾದ ದುಃಖವನ್ನು ತೋಡಿಕೊಂಡಿದ್ದಾರೆ. ಮಾನವಸೇವೆ, ಸೌಂದರ್ಯೋಪಾಸನೆ, ಸರೋಜಿನಿಯ ಕಾವ್ಯರಾಜ್ಯದ ದ್ವಿದಳ ಮಂತ್ರಿಗಳು.

ಸರೋಜಿನಿಯ ಕವನಗಳೆಲ್ಲಾ ಭಾವನಾಪ್ರಧಾನಗಳು ಹೇಗೋ ಹಾಗೆ ಸಂಗೀತ ಪ್ರಧಾನವಾಗಿವೆ. ಜನರ ಹೃದಯವನ್ನು ನೇರವಾಗಿ ಸೇರುತ್ತವೆ. ಭಾರತ ವೈಭವ, ವಸಂತಋತು, ಪ್ರೇಮ, ಇವುಗಳ ಮೇಲೆ ಬರೆದ ಕವನಗಳು, ಅಮೃತಸೇಚನೆ. ಮೊಗಲ್ ಸಾಮ್ರಾಟನಾಗಿದ್ದ ಔರಂಗ ಜೇಬನ ಮಗಳು ರಾಜಕುಮಾರಿ ಜಬನೀಸಳ ಮೇಲೆ ಒಂದು ಪದ್ಯ ಬರೆ ಯುತ್ತಾ, ಆಕೆಯ ಸೌಂದರ್ಯ ಗುಲಾಬಿಹೂವಿಗೂ ಹೆಚ್ಚಾಗಿ, ಆ ಸೌಂದ ರ್ಯಕ್ಕೆ ತಲೆಬಾಗಿ ಕೋಗಿಲೆಯೂ ಹಾಡುವಂತೆ ಮಾಡಿತು ಎಂಬುದಾಗಿ ಸೌಂದರ್ಯವನ್ನು ಪೂಜಿಸಿದ್ದಾರೆ.

ಸೌಂದರ್ಯ ಕೀರ್ತನೆಯೊಂದನ್ನೇ ಸರೋಜಿನಿ ಹಾಡಲಿಲ್ಲ. 'ದಿ ಬುದ್ಧ' ಎಂಬ ಕವನದಲ್ಲಿ ಆತ್ಮ ಸಂತೋಷ ಪಡೆಯಲು, ಸಂತೋಷದ ಆಳವನ್ನು ಕಂಡುಹಿಡಿಯಲು ಹೃದಯಂಗಮವಾಗಿ ಚಿತ್ರಿಸಿದ ಚಿತ್ರ ಮರ್ಮಬೇಧಕ

ವಾಗಿದೆ ವರ್ಣಿಸಲು ಅಸಾಧ್ಯವಾದ ಬುದ್ಧನ ವ್ಯಕ್ತಿತ್ವ ಹೇಗೆ ಮನ ಶ್ಯಾಂತಿಯನ್ನು ಕೊಡುವುದೆಂಬುದನ್ನು ವರ್ಣಿಸಿದ್ದಾರೆ. ಅದೊಂದು ಅಪೂರ್ವಕವನ.

ಭಾರತದ ಜನಪದ ಸಾಹಿತ್ಯದ ಹಾಡುಗಳನ್ನು ಇಂಗ್ಲೀಷ್ ಭಾಷೆ ಯಲ್ಲಿ ಹೆಣೆದ ಭಾಗ್ಯ ಸರೋಜಿನಿಯದು. ಭಾರತದಂತಹ ಜನರ ಸುಖ ದುಃಖಗಳನ್ನು ಚಿತ್ರಿಸುವ ಆ ಹಾಡುಗಳನ್ನು ಇಂಗ್ಲೀಷಿಗೆ ತಂದು ನಮ್ಮ ಸ್ಥಿತಿ ತಿಳಿಯುವಂತೆ ಸಾಹಸಮಾಡಿದ್ದಾರೆ. ಭಾರತೀಯರಿಗೆ ಅಚ್ಚು ಮೆಚ್ಚಾದ ಮತ್ತು ಎಲ್ಲ ಭಾರತೀಯರಿಗೂ ತಿಳಿದಂಥ, ಪ್ರತಿದಿನ ಬೀದಿಯಲ್ಲಿ ಹಾಡು ಹೇಳಿಕೊಂಡು ಹೋಗುವ ಜೋಗುಳಕಾರರ ಜೀವನವೇ ಈ ಸಾಹಿತ್ಯದ ತಿರುಳು. ಲಕ್ಷಾಂತರ ಹಳ್ಳಿಗಳಲ್ಲಿ ವಾಸಮಾಡುತ್ತಿರುವ ಬಡ ರೈತನ ಜೀವನ ರಸವೇ ಈ ಜನಪದ ಸಾಹಿತ್ಯದ ವಸ್ತು. ಸರೋಜಿನಿ ಕೆಲವುಸಲ ಪೂಜಾರಿಣಿಯಾಗಿ, ಪ್ರಿಯನನ್ನು ಕುರಿತು ಹಾಡಿದ್ದಾರೆ.

ಭಾರತದ ಮೇಲಿನ ಪ್ರೀತಿಯೇ ಆಕೆಯ ಪದ್ಯ ವಸ್ತುಗಳಲ್ಲಿ ಬಹು ಮುಖ್ಯವಾಗಿ ಕಾಣುವುದು. ಭಾರತದ ಪ್ರತಿಯೊಂದು ಅಂಗಗಳ ಮೇಲೂ ಪ್ರತಿಯೊಂದು ವಿಷಯಗಳ ಮೇಲೂ ಹಾಡಿದ್ದಾರೆ. 'ಟು ಇಂಡಿಯಾ' ಎಂಬ ಪದ್ಯದಲ್ಲಿ ಭಾರತಕ್ಕಾಗಿ ಮರುಗಿದ್ದಾರೆ; ರೋದಿಸಿದ್ದಾರೆ; ವ್ಯಸನ ಪಟ್ಟಿದ್ದಾರೆ. ಭಾರತ ಇನ್ನೂ ಎಚ್ಚೆತ್ತಿಲ್ಲವೆಂದು ದುಃಖಿಸಿದ್ದಾರೆ. ದುಃಖದ ಕಡಲನ್ನು ಬಿಟ್ಟು ಸಂತೋಷ ಭೂಮಿಗೆ ಬರಬೇಕೆಂದು ಹಂಬಲಿಸಿದ್ದಾರೆ. ಭಾರತ ಪುರಾತನವಾದುದಾದರೂ, ಇನ್ನೂ ಯೌವನಾವಸ್ಥೆಯಲ್ಲಿರುವು ದೆಂದು ಆಕೆಯ ಮತ. ವಿಶ್ವಶಾಂತಿಗೆ ದಾರಿ ತೋರಿಸಲು ಭಾರತ, ಧೈರ್ಯ ಗುಂದದೆ, ತನ್ನ ಕರ್ತವ್ಯ ಮಾಡಬೇಕು. ಭಾರತದ ಭವಿಷ್ಯ ಅದ್ಭುತವಾಗಿದೆ. ಭಾರತ, ನವಪ್ರಪಂಚದ ನಿರ್ಮಾಣದಲ್ಲಿ ಕೀರ್ತಿ ಧ್ವಜ ಹಾರಿಸಬೇಕು' ಎಂಬುದಾಗಿ ಸರೋಜಿನಿಯ ಆಸೆ.

ಸರೋಜಿನಿ ಕಾವ್ಯಸಾಮ್ರಾಜ್ಯದ ಚಕ್ರವರ್ತಿನಿ ಎಂಬುದನ್ನು ಮೆಚ್ಚಿ ಲಂಡನ್ನಿನ ರಾಯಲ್ ಸೊಸೈಟಿ ಆಫ್ ಲಿಟರೇಚರ್‌ನವರು ಆಕೆಯನ್ನು ತಮ್ಮ ಸಂಘದ ಸದಸ್ಯಣಿಯನ್ನಾಗಿ ತೆಗೆದುಕೊಂಡಿದ್ದರು. ಈ ಸಂಘದಲ್ಲಿ

ಸದಸ್ಯರಾಗುವುದು ಸುಲಭವಲ್ಲ. ಕೇವಲ ಮೇಧಾವಿಗಳಾದ ಕೆಲವೇ ಕವಿಗಳು ಮತ್ತು ಸಾಹಿತಿಗಳು ಇದರ ಸದಸ್ಯರು. ಸರೋಜಿನಿ ಈ ಸಂಘದ ಸದಸ್ಯಳಾಗಿ ಭಾರತಕ್ಕೆ ಗೌರವ ತಂದರು.

## ರಾಜಕಾರಿಣಿ

ಸರೋಜಿನಿ ನಾಯ್ಡು ಅಖಿಲ ಭಾರತದ ರಾಜಕೀಯದಲ್ಲಿ ಭಾಗ ವಹಿಸಿದಾರಭ್ಯ ಭಾರತದ ಮಹಿಳೆಯರಲ್ಲಿ ನವಚೇತನವುಂಟುಮಾಡಿದಾರೆ. ಕಾವ್ಯದ ಸೊಗಸು ರಾಜಕೀಯದಲ್ಲಿ ಬರಲಾರಂಭಿಸಿದರೂ, ಅನೇಕರು ಸರೋಜಿನಿ ನಾಯ್ಡು ಕಾವ್ಯಪ್ರಪಂಚವನ್ನು ಬಿಟ್ಟುದನ್ನು ಒಪ್ಪಲಿಲ್ಲ. ಆದರೆ ಸರೋಜಿನಿ ತನ್ನ ಕಣ್ಣ ಮುಂದೆ ಭಾರತೀದೇವಿ ಗುಲಾಮಗಿರಿಯ ಸಂಕೋಲೆಯಿಂದ ಬಿಗಿಸಿಕೊಂಡು ದಾಸ್ಯದಲ್ಲಿ ತೊಳಲುತ್ತಿದ್ದುದನ್ನು ಸಹಿಸಲಾರದೆ, ತನ್ನ ಸ್ಥಾನ, ಹೋರಾಟದಲ್ಲಿ ತೊಡಗಿದ್ದ ತನ್ನ ಸೋದರರ ಜೊತೆಗೆ ಎಂದು ತಿಳಿದು ತಕ್ಷಣ ಚಳುವಳಿಯಲ್ಲಿ ಪ್ರತ್ಯಕ್ಷ ಭಾಗವಹಿಸಿದರು. ಮಹಿಳಾ ಚಳುವಳಿ, ಸ್ವಾತಂತ್ರ್ಯ ಚಳುವಳಿ ಜೊತೆಯಾಗಿ ಆಕೆಯ ಕಾರ್ಯಾರಂಗವಾಯಿತು. ೧೯೧೬ನೇ ಇಸ್ವಿಯಲ್ಲಿ ಈಕೆ ಒಂದು ಪ್ರಭಾವಶಾಲಿ ಭಾಷಣಮಾಡಿದರು. ಇದೇ ಆಕೆಯನ್ನು ಪ್ರತ್ಯಕ್ಷವಾಗಿ ಸಾರ್ವಜನಿಕ ವೇದಿಕೆಯನ್ನು ಹತ್ತಿಸಿತು. ೧೯೧೬ರಲ್ಲಿ ಶ್ರೀ ಅಂಬಿಕಾಚರಣ ಮುಜುಮದಾರರ ಅಧ್ಯಕ್ಷತೆಯಲ್ಲಿ ರಾಷ್ಟ್ರ ಮಹಾ ಅಧಿವೇಶನವು ನಡೆಯಿತು. ಲೋಕಮಾನ್ಯ ಬಾಲಗಂಗಾಧರ ತಿಲಕರು ಇದೇ ಕಾಂಗ್ರೆಸ್ಸಿನಲ್ಲಿಯೇ **"ಸ್ವರಾಜ್ಯವು ನಮ್ಮ ಆಜನ್ಮಸಿದ್ಧ ಹಕ್ಕು. ಅದನ್ನು ನಾವು ದೊರಕಿಸಿಯೇ ತೀರುವೆವು"** ಎಂದು ವೀರಘೋಷಣೆಯನ್ನು ಮಾಡಿದರು. ಹಿಂದೂ-ಮುಸ್ಲಿಂ ಒಪ್ಪಂದವಾಗಿ ನಾವೆಲ್ಲರೂ ಹಿಂದೂಸ್ಥಾನದವರು ಎಂಬ ಜಯಘೋಷ, ಎಲ್ಲೆಡೆಯಲ್ಲಿಯೂ ಹಬ್ಬಿತು. ಆಗಲೇ ಸರೋಜಿನಿದೇವಿ ಮೊಟ್ಟಮೊದಲನೆಯ ಸಲ ಈ ಅಧಿವೇಶನದಲ್ಲಿ 'ಸ್ವಾಯತ್ತ ಶಾಸನ'ದ ಮೇಲೆ ಬಹಳ ವಿಚಾರಪೂರಿತ ಮತ್ತು ಪರಿಣಾಮಕಾರಿಯಾದ ಭಾಷಣ

ಕಾಂಗ್ರೆಸ್ಸಿನ ಮೂಲಸೂತ್ರಗಳನ್ನು ವಹಿಸಿಕೊಂಡು, ಧರಾಶನದಲ್ಲಿ ಉಪ್ಪು ತಯಾರುಮಾಡುವ ತಂಡದ ನಾಯಕಿಯಾಗಿ ಕೆಲಸ ಮಾಡುತ್ತಿರುವಾಗ ದಸ್ತಗಿರಿಯಾದರು. ೧೯೩೦ನೇ ಇಸವಿ ಮೇ ೨೧ನೇ ತಾರೀಖಿಗೆ ಬಂಧಿಸಲ್ಪಟ್ಟು ಯರವಾಡ ಸೆರೆಮನೆಗೆ ಕಳುಹಿಸಲ್ಪಟ್ಟರು. ಸತ್ಯಾಗ್ರಹದ ನಂತರ ಒಪ್ಪಂದ. ಗಾಂಧಿ-ಇರ್ವಿನ್ ಒಪ್ಪಂದವಾಯಿತು. ಯರವಾಡ ಸೆರೆಮನೆಯಲ್ಲಿ ನಡೆದ ಸಪ್ರೂ-ಜಯಕರ ಸಂಧಾನದಲ್ಲಿ ಸರೋಜಿನಿಯೂ ಭಾಗವಹಿಸಿದರು. ಕಾಂಗ್ರೆಸ್ ಚಕ್ರಗೋಷ್ಠಿಯಲ್ಲಿ ಭಾಗವಹಿಸಲು ನಿರ್ಧರಿಸಿ ಗಾಂಧೀಜಿಯನ್ನು ಏಕಮಾತ್ರ ಕಾಂಗ್ರೆಸ್ಸಿನ ಪ್ರತಿನಿಧಿಯನ್ನಾಗಿ ಆರಿಸಿತು. ಆಗ ಗಾಂಧೀಜಿಯ ಜೊತೆಗೆ ಸರೋಜಿನಿಯೂ ಲಂಡನ್ನಿಗೆ ತೆರಳಿದರು. ಚಕ್ರಗೋಷ್ಠಿಯನ್ನು ಮುಗಿಸಿಕೊಂಡು ಗಾಂಧೀಜಿ ಬರಿಗೈಯಲ್ಲಿ ಮರಳಿಬಂದರು. ಬಂದ ಕೂಡಲೇ ಅವರ ದಸ್ತಗಿರಿಯಾಯಿತು. ದೇಶದ ನಾಯಕರೆಲ್ಲ ದಸ್ತಗಿರಿಯಾದರು. ಅಖಿಲ ಭಾರತ ಕಾಂಗ್ರೆಸ್, ನ್ಯಾಯಬಾಹಿರವಾದ ಸಂಸ್ಥೆಯಾಯಿತು. ಸರೋಜಿನಿ ಆ ಸಂಸ್ಥೆಯ ತಾತ್ಕಾಲಿಕ ಅಧ್ಯಕ್ಷಿಣಿಯಾದರು. ಕೂಡಲೇ ಆಕೆಯನ್ನು ದಸ್ತಗಿರಿ ಮಾಡಿದರು. ೧೯೪೧ನೇ ಇಸವಿಯಲ್ಲಿ ನಡೆದ ವೈಯಕ್ತಿಕ ಸತ್ಯಾಗ್ರಹದಲ್ಲಿ ಸೆರೆಮನೆ ಸೇರಿದರು. ೧೯೪೨ನೇ ಇಸ್ವಿ ಆಗಸ್ಟ್ ಕ್ರಾಂತಿಯಲ್ಲಿ ಮಹಾಪಾತ್ರವಹಿಸಿದರು. ವೀರರಮಣಿಯಂತೆ ಹೋರಾಡಿದರು. ಗಾಂಧೀಜಿಯೊಂದಿಗೆ ಆಗಾಖಾನ್ ಅರಮನೆಯಲ್ಲಿ ಸೆರೆಯಲ್ಲಿದ್ದರು. ಗಾಂಧೀಜಿ ೨೧ ದಿನಗಳ ಪ್ರಾಯೋಪವೇಶ ಕೈಗೊಂಡಾಗ ಸರೋಜಿನಿಯೇ ಆರೈಕೆಮಾಡುತ್ತಿದ್ದುದು. ಪ್ರಾಯೋಪವೇಶ ಮುಗಿದ ನಂತರ ಮೊದಲಸಾರಿ ಆಕೆಯೇ ಗಾಂಧೀಜಿಗೆ ಕಿತ್ತಳೆ ಹಣ್ಣಿನ ರಸ ಕೊಟ್ಟಿದ್ದು. ಅನಾರೋಗ್ಯದ ನಿಮಿತ್ತ ಸೆರೆಮನೆಯಿಂದ ಬಿಡುಗಡೆಯಾದರು.

ಆರೋಗ್ಯವು ಸರಿಹೊಂದಿದ ಕೂಡಲೇ ಮುಂಚಿನಂತೆ ಇನ್ನೊಮ್ಮೆ ಇಳಿವಯಸ್ಸಿನಲ್ಲಿಯೂ ಭಾರತದಲ್ಲೆಲ್ಲಾ ಗುಡುಗಾಡಿದರು. ಸರ್ಕಾರವು ಹೆದರಿ ಆಕೆಯ ಬಾಯಿಗೆ ಬೀಗ ಹಾಕಿತು. ರಾಷ್ಟ್ರನಾಯಕರ ಬಿಡುಗಡೆಯಾದ ಮೇಲೆ, ತನ್ನ ಪ್ರತಿಬಂಧಕಾಜ್ಞೆಯನ್ನು ಸರ್ಕಾರ ತಾನೇ ವಾಪಸು ತೆಗೆದುಕೊಂಡಿತು.

# ತೊಟ್ಟಿಲನ್ನು ತೂಗುವ ಕೈ ರಾಜ್ಯವನ್ನೂ ಆಳಬಲ್ಲುದು

ಭಾರತದ ರಾಜಕೀಯ ಮತ್ತು ಸಾಮಾಜಿಕ ಚಳುವಳಿಯ ೫೫ ವರ್ಷದ ಚರಿತ್ರೆಯಲ್ಲಿ ಸರೋಜಿನಿ ಭಾಗವಹಿಸದ ಯಾವ ಚಳುವಳಿಯೂ ಇರಲಾರದು. ಶ್ರೀ ಗೋಪಾಲಕೃಷ್ಣ ಗೋಖಲೆ ಮಹಾತ್ಮ ಗಾಂಧಿಯವರಿಗೆ ಬಲಗೈಯಾಗಿ ಬೆಂಬಲಕೊಟ್ಟಿದ್ದಾರೆ. ಭಾರತದ ಸ್ವಾತಂತ್ರ್ಯಕ್ಕಾಗಿ ಹಗಲಿಗೆ ಹಗಲು ಕೊಟ್ಟು ದುಡಿದು ತ್ಯಾಗಮಾಡಿದ್ದಾರೆ. ಶ್ರೀ ಗೋಖಲೆ ತೀರಿಕೊಂಡಾಗ ಸರೋಜಿನಿ ದುಃಖದಿಂದ ಕಂಬನಿಗರೆದರು. 'ಗೋಖಲೆ ಯವರ ಜೀವನ ನಮಗೊಂದು ಪವಿತ್ರವಾದ ಪಾಠ ಕಲಿಸಿದೆ. ಮಾನವ ಸೇವೆಮಾಡುವುದು ಪ್ರೀತಿಗೋಸ್ಕರ; ಯಾವ ಫಲಾಪೇಕ್ಷೆಯಿಂದಲೂ ಅಲ್ಲ' ಎಂದಿದ್ದಾರೆ.

ಗಾಂಧೀಜಿಯವರಲ್ಲಿ ಸರೋಜಿನಿಗೆ ತುಂಬಾ ಮೆಚ್ಚಿಕೆ. ಸರೋಜಿನಿಗೆ ಗಾಂಧೀಜಿ,-ಭಾರತದ ಬುದ್ಧ, ಚೈತನ್ಯ, ರಾಮಾನುಜ, ರಾಮಕೃಷ್ಣ, ಎಲ್ಲಾ. ಗಾಂಧೀಜಿಯನ್ನು ಆಕೆ ಮೆಚ್ಚಿರುವುದು ಅವರ ಪವಿತ್ರ ಉದ್ದೇಶಗಳಿಗಾಗಿ. ತಮ್ಮ ಹೃದಯವನ್ನು ದೇಶಕ್ಕಾಗಿ ಗಾಂಧೀಜಿಯವರಿಗೆ ಒಪ್ಪಿಸಿದ್ದಾರೆ. ಗಾಂಧೀಜಿ ಶ್ರೀಕೃಷ್ಣ; ಸರೋಜಿನಿ ಅವರ ಕೈಯಲ್ಲಿನ ಕೊಳಲು ಮಾತ್ರ. ಕಸ್ತೂರಬಾ ವಿಷಯದಲ್ಲೂ ಸರೋಜಿನಿಗೆ ತುಂಬಾ ಗೌರವ, ಮಮತೆ. ಆಕೆಯ ವಿಷಯ ಬರೆಯುತ್ತಾ 'ದಕ್ಷಿಣ ಆಫ್ರಿಕದ ಶ್ರೇಷ್ಠನಾದ ನಾಯಕ, ದೇಶಪ್ರೇಮಿಗಳನ್ನು ತಯಾರುಮಾಡುತ್ತಿದ್ದ. ವಿಶ್ರಾಂತಿಯನ್ನು ತೆಗೆದು ಕೊಳ್ಳುತ್ತಿದ್ದುದು ನೆಲದ ಮೇಲೆ. ಆತನ ಹೆಂಡತಿ ನೂರಾರು ಸಣ್ಣ ಸಣ್ಣ ಮನೆಗೆಲಸಗಳಲ್ಲಿ ನಿರತರಾಗಿದ್ದರು. ಪ್ರಪಂಚದ ಖ್ಯಾತಿವೆತ್ತ ವೀರರಮಣಿ ಯರಂತೆ ದೇಶಸೇವೆಯಲ್ಲಿ ಬಂದ ಕಷ್ಟಗಳನ್ನು ನೆನೆದು, ಮನಸ್ಸಿಗೆ ತಾರದೆ, ಸಂತೋಷದಿಂದ ಮನೆಗೆಲಸದಲ್ಲಿ ತೊಡಗಿದ್ದರು' ಎಂದಿದ್ದಾರೆ.

ಒಂದು ಸಲ ಸರೋಜಿನಿ, ನಿರ್ಧಾರ ತೆಗೆದುಕೊಂಡ ಮೇಲೆ ಆ ಕೆಲಸ ವನ್ನು ಒಮ್ಮನಸ್ಸಿನಿಂದ ಮಾಡುತ್ತಾರೆ. ದೇಹಾರೋಗ್ಯವನ್ನು ಕೂಡ ಲೆಕ್ಕಿಸುವುದಿಲ್ಲ ಮನೆಮಠಗಳ ತಾಪತ್ರಯವನ್ನು ನೆನಪು ತಾರದೆ ಕೊಳ್ಳುವುದೇ

ಇಲ್ಲ. ತಾನು ಹಿಡಿದ ಕೆಲಸದಲ್ಲಿ ಜಯ ದೊರೆಯುವವರೆಗೂ ಅದನ್ನು ಬಿಡುವುದಿಲ್ಲ. ಸರೋಜಿನಿ ಭಾರತ ಸಂಚಾರ ಹೊರಟಾಗ ಆಕೆಯ ಭಾಷಣ ಕೇಳಲು ಜನ ತಂಡತಂಡವಾಗಿ ಬಂದು ನೆರೆಯುತ್ತಿದ್ದರು. ಭಾಷಣಕಲೆ ಬಹಳ ಚೆನ್ನಾಗಿ ಅಭ್ಯಾಸಮಾಡಿಕೊಂಡಿದ್ದರು. ಎಷ್ಟು ಬೇಕೋ ಅಷ್ಟೇ ಮಾತು. ಯಾವ ಪದ ಬೇಕೋ ಅದೇ ಪದ. ಸಮಯಕ್ಕೆ ತಕ್ಕಂತೆ ಮಾತು. ಆಕೆಯ ಭಾಷಣ ಕೇಳುವುದೆ, ಒಂದು ಹಬ್ಬ. ಆ ಭಾಷಣದಲ್ಲಿ ಬಿಸಿಯಿತ್ತು; ಬಿರುಸಿತ್ತು; ಬಿರುಗಾಳಿಯಿತ್ತು. ಪಂಜಾಬಿನಲ್ಲಿ ಜಲಿಯನ್‌ವಾಲಾ ಬಾಗ್‌ನ ಮೇಲೆ ಸರ್ಕಾರ ಅಮಾನುಷವಾದ ರೌಲತ್ ಶಾಯಿದೆ, ಆರ್ಮ್ಸ್ ಶಾಯಿದೆಯನ್ನು ಚಲಾಯಿಸಿತು. ಆ ಶಾಯಿದೆಗಳ ವಿರುದ್ಧವಾಗಿ ಸರೋಜಿನಿ ಪ್ರತಿಭಟನೆಯನ್ನು ತೋರಿ ಭಾಷಣಮಾಡಿದಾಗ, ಆ ಭಾಷಣಗಳ ಉಗ್ರ ಸ್ವರೂಪವನ್ನು ಕಂಡು ಸರ್ಕಾರ ಆಕೆಯನ್ನು ಕೆಣಕಿದರೆ ಎಲ್ಲಿ ರೌದ್ರಾವತಾರ ತಾಳುವಳೋ ಎಂದು ಹೆದರಿ ಸುಮ್ಮನಿತ್ತು. ಸ್ತ್ರೀಯನ್ನು ಕೆಣಕಿ ಬದುಕಿದವರುಂಟೆ?

ಹಿಂದೂ-ಮುಸ್ಲಿಂ ಐಕ್ಯತೆಯ ವಿಚಾರದಲ್ಲಿ ಸರೋಜಿನಿಗೆ ತುಂಬಾ ನಂಬಿಕೆ, ಆಸೆ ಇತ್ತು. ಕೋಮುವಾರು ಜಗಳಗಳು ತಪ್ಪಿ, ಭಾರತವು ಏಕತಂತ್ರವಾಗದ ಹೊರತು ದೇಶಕ್ಕೆ ಮುಕ್ತಿಯಿಲ್ಲವೆಂಬುದು ಆಕೆಯ ಮತ. ಇದಕ್ಕಾಗಿ ಆಕೆ ಎರಡು ಮತಗಳ ಸಾಮರಸ್ಯತೆಯನ್ನು ತಿಳಿಸಿ ಸಹೋದರ ಭಾವವನ್ನು ಬೀರುತ್ತಾರೆ. ಹುಟ್ಟು ಬ್ರಾಹ್ಮಣರು, ಬೆಳೆದದ್ದು ಮುಸ್ಲಿಂ ರಾಜ್ಯವಾದ ಹೈದರಾಬಾದಿನಲ್ಲಿ. ಜೀವನತರಂಗ ನಡೆದದ್ದು ಅಲ್ಲಿಯೇ. ಆಕೆಯ ಬಾಲ್ಯಗಳೆಯರು, ಗೆಳತಿಯರು ಮುಸಲ್ಮಾನರು. ಉರ್ದು ಭಾಷೆ ಆಕೆಯ ಹಸ್ತಗತ. ಆಕೆ ಇಸ್ಲಾಂ ಸಂಸ್ಕೃತಿಯನ್ನು ಚೆನ್ನಾಗಿ ಅಭ್ಯಾಸ ಮಾಡಿದ್ದರು. ಆದ್ದರಿಂದಲೇ ಹಿಂದೂ-ಮುಸ್ಲಿಂರ ಜಗಳ ಅಸ್ಥಿರ, ನೈಜವಲ್ಲ ಎಂದು ಆಕೆ ಅಭಿಪ್ರಾಯಪಡುತ್ತಿದ್ದರು. ನೂರಾರು ವರ್ಷಗಳಿಂದ ಅಣ್ಣ ತಮ್ಮಂದಿರಂತೆ ಜೀವಿಸಿದ ಹಿಂದೂ-ಮುಸ್ಲಿಂ ಐಕ್ಯತೆಗೆ ಸರೋಜಿನಿದೇವಿಯು ಶ್ರಮಿಸಿದಷ್ಟು ಮತ್ತಾರೂ ಸಾಧಿಸಿರಲಾರರು.

ಮಹಿಳೆಯರ ಏಳಿಗೆಯ ವಿಚಾರದಲ್ಲೂ ಹಾಗೆಯೆ. ಗಂಡಸರೂ, ಹೆಂಗಸರೂ ಸಮಾನರು. ಅವರಿಗಿದ್ದಂತೆ, ಇವರಿಗೂ ಹಕ್ಕಿರಬೇಕು ಎಂದು

ವಾದಿಸಿದ್ದರು. ಬಾಲ್ಯವಿವಾಹ, ಪರದಾ ಪದ್ಧತಿ ನಿರ್ಮೂಲವಾಡಲು ತುಂಬಾ ಚಳುವಳಿ ಹೂಡಿ ಹೋರಾಡಿದರು. ಗಂಡಸರಿಗಿಂತ ಬುದ್ಧಿಶಕ್ತಿ ಯಲ್ಲಿ, ಧೈರ್ಯದಲ್ಲಿ, ಜವಾಬ್ದಾರಿ ಕೆಲಸದಲ್ಲಿ, ಕಾರ್ಯನೈಪುಣ್ಯತೆಯಲ್ಲಿ, ಹೆಂಗಸರು ಕಡಿಮೆಯಿಲ್ಲವೆಂದು ತಮ್ಮ ಸ್ವಂತ ಉದಾಹರಣೆಯಿಂದಲೇ ಪ್ರಪಂಚಕ್ಕೆ ತೋರಿಸಿಕೊಟ್ಟರು.

ಭಾರತದ ಮಹಿಳೆಯರು ನವನಾಗರಿಕತೆಗೆ ಹೊಂದಿಕೊಂಡು ಹೋಗ ಬೇಕೆಂದು ಉಪದೇಶಿಸಿದರೂ, ಸೀತೆ, ಸಾವಿತ್ರಿ, ದಮಯಂತಿ, ದ್ರೌಪದಿ ಮಹಾಸಾಧ್ವಿಯರನ್ನನುಸರಿಸಿ ಅವರ ದಾರಿಯಲ್ಲಿ ಹೋಗಬೇಕೆಂದು ಪ್ರತಿ ಪಾದಿಸುತ್ತಿದ್ದರು. ಗಂಡನಿಗೆ ತಕ್ಕ ಹೆಂಡತಿಯಾಗಿ ಬಾಳಬೇಕು. ಭಾರತದ ಸ್ತ್ರೀಯರಾದ ಅಹಲ್ಯಾಬಾಯಿ, ಚಾಂದಬೀಬಿ, ಝಾನ್ಸಿ ಲಕ್ಷ್ಮೀಬಾಯಿ ಯವರಂತೆ ಧೈರ್ಯದಿಂದ ವೀರಲಕೆಸಗಳನ್ನು ಮಾಡಬೇಕು ಎಂದು ಸಾವಿರ ಸಲ ಹೇಳಿದ್ದಾರೆ.

**'ತೊಟ್ಟಿಲನ್ನು ತೂಗುವ ಕೈ ರಾಜ್ಯವನ್ನೂ ಆಳಬಲ್ಲುದು'.** ಒಳ್ಳೆಯ ತಾಯಿ ದೇಶದ ಅಭಿವೃದ್ಧಿಯನ್ನು ಬಯಸಿ, ತನ್ನ ಮಕ್ಕಳನ್ನು ದೇಶಪ್ರೇಮಿಗಳನ್ನಾಗಿ ಬೆಳೆಸಿ ದೇಶವಾತ್ಸಲ್ಯವನ್ನು ಹುಟ್ಟಿಸುತ್ತಾಳೆ.

ಭಾರತದ ಮಹಿಳೆಯರು ಯೋಗ್ಯ ತಾಯಂದಿರಾಗಬೇಕೆಂದು ಸರೋಜಿನಿ ಒತ್ತಿ ಹೇಳಿದಷ್ಟು ಇನ್ನಾರೂ ಹೇಳಿರಲಾರರು. ತಾಯಂದಿರಾಗಿ ವಿಜಯಿಗಳಾದರೆ ದೇಶದ ಸ್ವಾತಂತ್ರ್ಯ ಕಟ್ಟಿಟ್ಟ ಬುತ್ತಿಯಂತೆ. ತಾಯಂದಿರ ಘನತೆ, ಗಾಂಭೀರ್ಯದ ಮೇಲೆ ದೇಶದ ನಾಗರೀಕತೆ, ಏಳಿಗೆ, ಅವಲಂಬಿಸಿರು ತ್ತದೆ. ತಾಯಂದಿರು ಮೂಕರಾಗಿ, ಅಸಂಸ್ಕೃತರಿದ್ದರೆ ದೇಶ ಮುಂದುವರಿಯ ಲಾರದು. ಒಳ್ಳೆಯ ತಾಯಂದಿರಾಗಿ, ಒಳ್ಳೆಯ ನಾಗರೀಕರೂ ಆಗಿರ ಬೇಕು. ಮಹಿಳೆಯರು ದೇಶದ ಯೋಗ್ಯ ಪ್ರಜೆಗಳಾಗಿ ರಾಷ್ಟ್ರೀಯ ಮನೋ ಭಾವನೆಯುಳ್ಳ ಸ್ವಾತಂತ್ರ್ಯಪ್ರೇಮಿಗಳಾಗಿರಬೇಕು. ಭಾರತದ ಮಹಿಳೆ ಯರು, ದೇಶದ ಪ್ರತಿನಿಧಿ ಚುನಾವಣೆಗಳಲ್ಲಿ ತಮ್ಮ ಹಕ್ಕು ಚಲಾಯಿಸಿ, ಸೇವೆಮಾಡಲು ಸರೋಜಿನಿ ಬಹಳ ಕಷ್ಟಪಟ್ಟರು. ಆಕೆಯ ಪ್ರಯತ್ನದ ಫಲವಾಗಿ ಆಗ ಮಹಿಳೆಯರಿಗೆ ಮಂತ್ರಿಪದವಿ ಸಿಕ್ಕಿತು. ಸಂಯುಕ್ತ ಪ್ರಾಂತ್ಯದಲ್ಲಿ ವಿಜಯಲಕ್ಷ್ಮಿ ಪಂಡಿತ್, ಮದರಾಸಿನಲ್ಲಿ ರುಕ್ಮಿಣಿ ಲಕ್ಷ್ಮೀಪತಿ

ಮಂತ್ರಿಗಳಾಗಿದ್ದರು. ಇನ್ನೊಂದು ಖ್ಯಾತಿ ಸರೋಜಿನಿಗೇ ಸಲ್ಲಬೇಕು. ಭಾರತದ ಗಂಡಸರು, ಹಿಂದೂ, ಮುಸ್ಲಿಂ, ಪಾರ್ಸಿ, ಕ್ರಿಶ್ಚಿಯನ್ ಎಂದು ತಮ್ಮ ತಮ್ಮಲ್ಲಿಯೇ ಕಚ್ಚಾಡುತ್ತಿರುವಾಗ, ಭಾರತದ ಮಹಿಳೆಯರು, ಅವರು ಯಾವ ಜಾತಿ ಪಂಗಡಗಳಿಗೇ ಸೇರಿರಲಿ, ತಮ್ಮ ಹಕ್ಕುಬಾಧ್ಯತೆಗಳನ್ನು ರಕ್ಷಿಸಿಕೊಳ್ಳಲು ಒಟ್ಟಾಗಿ ಹೋರಾಡಿ, ತಮ್ಮ ಐಕ್ಯತೆಯನ್ನು ತೋರಿಸಿಕೊಡಲು ಸಹಾಯಕರಾದರು. ಇದಕ್ಕಿಂತ ಹೆಚ್ಚಿನ ಪಾಠಬೇಕೆ?

## ಆದರ್ಶ ಮಹಿಳೆ

ಸರೋಜಿನಿ ಭಾರತದ ಯುವಕರಿಗೆ ಆದರ್ಶಪ್ರಾಯ. ಆಕೆಯ ಅಭಿಪ್ರಾಯಗಳನ್ನು ಇತರರು ಒಪ್ಪಿದಂತೆ, ಭಾರತೀಯ ಯುವಕವೃಂದವೂ ಒಪ್ಪಿತು. ಆಕೆ ಎಲ್ಲೇ ಭಾಷಣ ಮಾಡಲಿ, ಯುವಕ ಸಮೂಹವೇ ಜಾಸ್ತಿ. ಆಗಾಗ ಉಪದೇಶಮಾಡುತ್ತ ಯುವಕರು ಬರೀ ಕನಸು ಕಾಣದೆ ಕಾರ್ಯಕ್ರಮ ಹಾಕಿಕೊಂಡು ದೇಶಸೇವೆಯಲ್ಲಿ ತೊಡಗಬೇಕೆಂದು ಹೇಳಿದ್ದಾರೆ. "ನೀವು ಯಾರಾದರೇನು? ಎಲ್ಲಿದ್ದರೇನು? ಭಿಕ್ಷುಕ, ಕಸಗುಡಿಸುವವ, ಎಲ್ಲರೂ ದೇಶಭಕ್ತರಾಗಬಹುದು. ದೇಶದ ಕಲ್ಯಾಣಕ್ಕಾಗಿ ನಿಮ್ಮ ಜೀವನವನ್ನು ಬಲಿಕೊಡಬೇಕು" ಎಂದು ಘೋಷಿಸಿದ್ದಾರೆ.

ಕಾಂಗ್ರೆಸ್‌ನ ಅತಿರಥ ಮಹಾರಥರ ಪೈಕಿ ಯುವಕಪ್ರಪಂಚದಲ್ಲಿ ಸರೋಜಿನಿಗಿದ್ದಷ್ಟು ಜನಾದರಣೀಯತೆ ಇನ್ನಾರಿಗೂ ಇಲ್ಲ. ಒಂದು ಸಲ ಸರೋಜಿನಿ ಹೇಳಿದರು: "ನಾನು ತೀರಿಕೊಂಡ ಮೇಲೆ ನನ್ನ ಗೋರಿಯ ಮೇಲೆ, 'ನಾನು ಭಾರತದ ಯುವಕವೃಂದವನ್ನು ಪ್ರೀತಿಸಿದೆ' ಎಂದು ಕೆತ್ತಿರಿ", ಎಂದು. ತುಂಬ ಮುದುಕಿಯಾಗಿ ಕೂದಲು ಹಣ್ಣುಹಣ್ಣಾಗಿದ್ದರೂ, ಇನ್ನೂ ತಮ್ಮ ಮಗಳು ಪದ್ಮಜ, ಲೀಲಾಮಣಿಯರಂತೆ ತಾವೂ ಯೌವನಸ್ಥರೆಂದು ಭಾವಿಸುತ್ತಿದ್ದರು.

ಸಿರಿವಂತರ ಗರ್ಭದಲ್ಲಿ ಬೆಳೆದುಬಂದರೂ ಬಡವರನ್ನು ಕಂಡರೆ ಬಹಳ ಪ್ರೀತಿ. ಅವರಿಗಾಗಿ ಬೇಕಾದಷ್ಟು ಸಹಾಯಮಾಡಿದ್ದರು;

ಸುಡಿದಿದ್ದರು. ಬಡತನದ ಬೇಗೆಯನ್ನು ಅರಿತಿದ್ದರು. ಕೂಲಿಗಾರರು, ರೈತರು, ಕೆಲಸಗಾರರು ಯಾವಾಗಲೂ ಆಕೆಯ ಸ್ಮೃತಿಯಲ್ಲಿಯೇ ಇರುತ್ತಿದ್ದರು. ೧೯೧೭ರಲ್ಲಿ ದಕ್ಷಿಣ ಆಫ್ರಿಕದ ಕೂಲಿಗಾರರ ಕಷ್ಟಗಳನ್ನು ಮನದಟ್ಟುಮಾಡಿಸಲು ಇಡೀ ಭಾರತ ಸಂಚಾರ ಕೈಗೊಂಡರು. ನಂತರ ದಕ್ಷಿಣ ಆಫ್ರಿಕಕ್ಕೆ ಪ್ರಯಾಣ ಬೆಳೆಸಿ ಕೂಲಿಕಾರರ ಚಳುವಳಿಯಲ್ಲಿ ಭಾಗ ವಹಿಸಿದರು. ಭಾರತಕ್ಕೆ ಬಂದ ಮೇಲೆ ಇಂಡಿಯಾ ಸರ್ಕಾರದೊಂದಿಗೆ ದಕ್ಷಿಣ ಆಫ್ರಿಕದ ಭಾರತೀಯ ಕೂಲಿಕಾರರ ಹಕ್ಕು ರಕ್ಷಣೆ ಮಾಡಬೇಕೆಂದು ತೀವ್ರವಾಗಿ ವಾದಿಸಿದರು.

## ಶಾಂತಿದೂತೆ

ಇದೆಲ್ಲಕ್ಕಿಂತ ಹೆಚ್ಚಾಗಿ ಸರೋಜಿನಿದೇವಿ ಶಾಂತಿದೂತೆ. ಹಿಂದೂ-ಮುಸ್ಲಿಂ ಐಕ್ಯತೆಯಲ್ಲಿ, ಅಂತರ್ರಾಷ್ಟ್ರೀಯ ಬಾಂಧವ್ಯ ಬೆಳೆಸುವುದರಲ್ಲಿ, ಹೊರದೇಶಗಳಲ್ಲಿ ರಾಯಭಾರಿಯಾಗಿ ಸಾಕಷ್ಟು ಸೌಹಾರ್ದವನ್ನುಂಟು ಮಾಡಿದ್ದರು. ಕಾಂಗ್ರೆಸ್‌ನ ನಾಯಕರುಗಳಲ್ಲೆಲ್ಲಾ ಈಕೆಯೇ ಹೆಚ್ಚು ಸಂಚಾರಮಾಡಿದವರು. ಯೂರೋಪ್, ಅಮೇರಿಕಾ, ಆಫ್ರಿಕಾ, ಏಷ್ಯಾ ದೇಶಗಳಲ್ಲಿ ಪ್ರವಾಸ ಕೈಕೊಂಡು ಭಾರತದ ವಿಷಯದಲ್ಲಿ ತಿಳುವಳಿಕೆ ಮಾಡಿಕೊಟ್ಟರು.

ಅತಿಥಿ ಅಭ್ಯಾಗತರನ್ನು ಸ್ವಾಗತಿಸುವುದರಲ್ಲಿ ಸರೋಜಿನಿಯದೇ ಒಂದು ಕೈವಾಡ. ಮಹಾರಾಜ ಬರಲಿ, ಅಥವಾ ರಕ್ತಕಿಡಿಯ ಸಮತಾ ವಾದಿ ಬರಲಿ, ಒಂದೇ ನೀತಿ, ಅದೇ ನಡೆವಳಿಕೆ. ತಾರತಮ್ಯ ಬುದ್ಧಿಯು ಇಲ್ಲವೇ ಇಲ್ಲ. ಆಕೆ ಬೊಂಬಾಯಿಯಲ್ಲಿ ತಾಜಮಹಲ್ ಹೋಟೆಲಿನಲ್ಲಿ ಇದ್ದಾಗ ಈ ದೃಶ್ಯ ನೋಡಬೇಕು.

ವಿನೋದ, ಹಾಸ್ಯ, ನಗು ಸರೋಜಿನಿಯ ದತ್ತಿ ಎಂದು ಮೊದಲೇ ತಿಳಿಸಿದ್ದೇನೆ. ಆಕೆಯ ಹಾಸ್ಯಪ್ರವೃತ್ತಿ ಒಂದು ಉಕ್ತಿಯನ್ನೇ ಮಾಡಿ ಬಿಟ್ಟಿದೆ. ತಮಾಷೆಗಾಗಿ ಜನ ಅನ್ನುತ್ತಾರೆ: "ಸರೋಜಿನಿಗೆ ಆಹಾರದ

ಊಟ ಎರಡು ಬೇಕಾದರೆ ಸಕಲಿಯ ಊಟ ಮೂರು ಬೇಕು" ಎಂದು. ಆಕೆಯ ವಿನೋದ ಎಷ್ಟು ಸ್ವಾರಸ್ಯವೋ ಆಕೆಯ ತೀಕ್ಷ್ಣವಾದ ಪ್ರತ್ಯುತ್ತರ ಅಷ್ಟೇ ಪರಿಣಾಮಕಾರಿ. ಅಮೇರಿಕಾ ದೇಶಕ್ಕೆ ಆಕೆ ಮೊಟ್ಟಮೊದಲನೆಯಸಲ ಭೇಟಿಕೊಟ್ಟರು. ಪತ್ರಿಕಾ ಪ್ರತಿನಿಧಿಗಳ ತಂಡವೇ ಆಕೆಯನ್ನು ಮುತ್ತಿತು. 'ಕ್ಯಾಥರೀನ್ ಮೇಯೋಳ ಬಗ್ಗೆ ನಿಮ್ಮ ಅಭಿಪ್ರಾಯವೇನು?' ಎಂದು ಕೇಳಿತು ಪತ್ರಿಕಾವೃಂದ. ತಕ್ಷಣ ಆಕೆ ನುಡಿದರು ಆಶ್ಚರ್ಯದಿಂದ: "ಕ್ಯಾಥರೀನ್ ಮೇಯೋ! ಯಾರಾಕೆ?" ಕ್ಯಾಥರೀನ್‌ಳ ಸಮಾಧಿ ಆಗಿ ಹೋಯಿತು. ಪತ್ರಿಕೋದ್ಯೋಗಿಗಳು ಮೂಗಿನ ಮೇಲೆ ಬೆರಳಿಟ್ಟುಕೊಂಡು ಹೊರಟುಹೋದರು.

ದಕ್ಷಿಣ ಆಫ್ರಿಕಾದಲ್ಲಿ ಸರೋಜಿನಿ ಪ್ರವಾಸಮಾಡುತ್ತಿದ್ದರು. ಆಗ ಸೇನಾಪತಿ ಹೆರಟ್ಸೋಜನು ಭೇಟಿಯಾದನು. ಸಂಭಾಷಣೆ ಪ್ರಾರಂಭ ವಾಯಿತು. ದಕ್ಷಿಣ ಆಫ್ರಿಕದಲ್ಲಿನ ಭಾರತೀಯರು ತಮ್ಮ ಸ್ವದೇಶಕ್ಕೇಕೆ ಹೋಗಿ ನೆಲೆಸುವುದಿಲ್ಲ ಎಂದು ಪ್ರಶ್ನಿಸಿದ ಹೆರಟ್ಸೋಜ್. ಸರೋಜಿನಿಯ ಉತ್ತರ ತಟಕ್ಕನೆ ಬಂತು: "ದಕ್ಷಿಣ ಆಫ್ರಿಕದಲ್ಲಿ ನೆಲೆಸಿರುವ ಹಾಲೆಂಡಿನವರಾದ ನೀವು ನಿಮ್ಮ ಸ್ವದೇಶವಾದ ನೆದರ್‌ಲ್ಯಾಂಡ್ಸಿಗೆ ಏತಕ್ಕಾಗಿ ಹೋಗುವುದಿಲ್ಲ?" ಸೇನಾಪತಿ ಕಕ್ಕಾಬಿಕ್ಕಿಯಾದರು.

೧೯೪೫ನೇ ಸೆಪ್ಟಂಬರ್ ೧೫ರಲ್ಲಿ ಸರೋಜಿನಿ ಕಾರ್ಯಸಮಿತಿಯಲ್ಲಿ ಭಾಗವಹಿಸಲು ಪೂನಾನಗರಕ್ಕೆ ಬಂದಿದ್ದರು. ಪೂನಾ ಲಾ ಕಾಲೇಜ್ ಹೈದರಾಬಾದ್ ಸಂಘದ ಆಶ್ರಯದಲ್ಲಿ ಆಕೆ ಭಾಷಣವನ್ನು ಮಾಡಿದರು. ಸಾವಿರಾರು ವಿದ್ಯಾರ್ಥಿಗಳು ನೆರೆದಿದ್ದರು. ಭಾರತದ ಕಮ್ಯೂನಿಸಂ, ರ್ಯಾಡಿಕಲಿಸಂ, ಮುಂತಾದ ಇಸಂಗಳನ್ನು ಚರ್ಚಿಸಿದರು. ಸರ್ಕಾರವು ಕಾಂಗ್ರೆಸ್ ಮೇಲೆ ಹೊರಡಿಸಿದ ರಾಜಕೀಯ ಸಾಹಿತ್ಯದ ವಿಚಾರವಾಗಿ ಮಾತನಾಡುತ್ತ "ಸರ್ಕಾರ, ಕಾಗದ ಇಲ್ಲ ಎಂದು ಹೇಳುತ್ತ ಕಾಗದದ ಪಡಿತರವನ್ನು ಯುದ್ಧದ ನಿಮಿತ್ತ ಕಡಿಮೆಮಾಡಿದೆ. ಕಾಗದದ ಅಭಾವದ ಕಾರಣದಲ್ಲಿ ಕಾಗದದ ಪಡಿತರ ಕಡಿಮೆಮಾಡಿದರೂ ಯುದ್ಧಕಾಲದ ಹಿಂದಿನದಕ್ಕಿಂತ ಈಗ ಹೆಚ್ಚಾಗಿ ಪುಸ್ತಕಗಳು ಬಂದಿವೆ. ಅಭಾವವಾದದ್ದು ಕಾಗದವಲ್ಲ, ಮೆದುಳಿನ ಅಭಾವ ಜಾಸ್ತಿ" ಎಂದು ಮೂದಲಿಸಿದರು.

ಸರೋಜಿನಿ ಕಾಂಗ್ರೆಸ್ಸಿನ ಕಾವ್ಯಮೂರ್ತಿ. ಭಾರತದ ಸೌಂದರ್ಯದ ಖಣಿ. ಸರೋಜಿನಿನಾಯ್ಡು ವಿರೋಧಾಭಾಸದ ಉದಾಹರಣೆ. ಜನ್ಮಭೂಮಿ ಬಂಗಾಳ, ಆಕೆ ಇರುವುದು ಹೈದರಾಬಾದ್ ಸಂಸ್ಥಾನ. ಹುಟ್ಟುಬ್ರಾಹ್ಮಣಿ; ಮದುವೆಯಾದುದು ಶೂದ್ರನನ್ನು. ಭಾರತೀಯರಾಗಿ ಇಂಗ್ಲಿಷಿನಲ್ಲಿ ಕವನ ಬರೆದರು. ಆಕೆಯ ಕಾವ್ಯವಾಹಿನಿ, ರಾಷ್ಟ್ರವಾಹಿನಿಯಾಗಿ ಹರಿದು, ವಿಶಾಲವಾದ ಅಂತರ್ರಾಷ್ಟ್ರೀಯತೆಯಲ್ಲಿ ಹರಿಯುತ್ತಿದೆ.

## ರಾಜ್ಯಪಾಲಕಳಾಗಿ ಸರೋಜಿನಿ

ಭಾರತಕ್ಕೆ ಸ್ವಾತಂತ್ರ್ಯ ಬಂದನಂತರ ಎಲ್ಲ ಪ್ರಾಂತ್ಯಗಳಲ್ಲಿಯೂ ಕಾಂಗ್ರೆಸ್ಸಿನ ಕಾರ್ಯಕ್ರಮಗಳನ್ನು ಮತ್ತು ಘೋಷಣೆಗಳನ್ನು ನಡೆಸಿಕೊಂಡು ಬರುವವರನ್ನೇ ಪ್ರಾಂತ್ಯಗಳ ಆಡಳಿತಗಾರರನ್ನಾಗಿ ಆರಿಸಲಾಯಿತು. ಆಗ ಭಾರತದ ನಾರೀಮಣಿಯರಲ್ಲಿ ಅಗ್ರಸ್ಥಾನ ವಹಿಸಿದ್ದ ಸರೋಜಿನಿ ನಾಯ್ಡು ರವರ ಹೆಸರು ಮೊದಲಾಗಿ ಕೇಳಿಬಂತು. ಸರೋಜಿನಿ, ಗಾಂಧೀಜಿ, ನೆಹರು; ಸರ್ದಾರ್, ರಾಜಾಜಿ ಇವರ ಜೊತೆಯಲ್ಲಿ ಜೊತೆಗಾರಳಾಗಿ ಕೆಲಸವನ್ನು ಮಾಡಿದವರು. ನೆಹರು ಸರೋಜಿನಿಗೆ, 'ನೀವು ಉತ್ತರಪ್ರದೇಶದ ಗವರ್ನರ್ ಆಗಿ ಹೋಗಬೇಕು' ಎಂದಾಗ ಕವಯಿತ್ರಿ ತುಂಬು ಹೃದಯದಿಂದ ಅದನ್ನು ಒಪ್ಪಿಕೊಂಡರು. ಭಾರತದ ಸ್ತ್ರೀವೃಂದಕ್ಕೆ ಸಂದ ಗೌರವವದು. ನೆಹರು ಜನ್ಮಪ್ರಾಂತ್ಯವಾದ ಉತ್ತರಪ್ರದೇಶದ ಗೌರ್ನರ್! ಪಂಡಿತ ಗೋವಿಂದ ವಲ್ಲಭ ಪಂತರು, ಆ ಪ್ರಾಂತ್ಯದ ಮುಖ್ಯಮಂತ್ರಿಗಳು. ಕೇಳಬೇಕೆ? ಸರೋಜಿನಿ ನಾಯ್ಡು ಭಾರತದ ಮೊಟ್ಟಮೊದಲನೆಯ ಮಹಿಳಾ ಗವರ್ನರ್ ಆಗಿ ಅಧಿಕಾರ ಸ್ವೀಕಾರ ಮಾಡಿದರು.

ಸರೋಜಿನಿ ನಾಯ್ಡು ಸುಮಾರು ಮೂರು ವರ್ಷಗಳ ತನಕ ಉತ್ತರ ಪ್ರದೇಶದ ಗವರ್ನರ್ ಆಗಿ ಉತ್ತಮ ಆಡಳಿತಗಾರಳೆನಿಸಿ, ಸೂಕ್ತ ಸಲಹೆ ಗಳನ್ನು ಆಗಾಗ್ಗೆ ಕೊಡುತ್ತಾ ತನ್ನ ಕವಿಸಹಜವಾದ ವಾಣಿಯಲ್ಲಿ ಅನೇಕ ದುರ್ಭರ ಪ್ರಸಂಗಗಳನ್ನು ಸರಳರೀತಿಯಿಂದ ಯಶಸ್ವಿಯಾಗಿ ಬಿಡಿಸಿದರು.

ಉತ್ತರಪ್ರದೇಶದ ಮೂಲೆಮೂಲೆಗಳನ್ನು ಸುತ್ತಿ ತುಂಬಾ ಜನಾದರಣೀಯ ರಾಜ್ಯಪಾಲಕಳೆಂದು ಹೆಸರು ಪಡೆದ ಕೀರ್ತಿ ಸರೋಜಿನಿಗೆ ಸಲ್ಲುವುದು. ಗೋವಿಂದ ವಲ್ಲಭ ಪಂತರು ಒಂದು ಸಲ ಹೀಗೆ ಹೇಳಿದರು: "ಪವಿತ್ರ ಯಾತ್ರಾಸ್ಥಳ ಮತ್ತು ನದಿಗಳನ್ನೊಳಗೊಂಡ ಉತ್ತರಪ್ರದೇಶಕ್ಕೆ ಸರೋಜಿನಿ ಮಾತೆ ರಾಜ್ಯಪಾಲಕಳಾಗಿ ಬಂದಿರುವದು ನಮ್ಮ ಪುಣ್ಯ!" ಎಂದು.

೧೯೪೯ನೇ ಇಸ್ವಿಯ ಕೊನೆಗೆ ಸರೋಜಿನಿದೇವಿ ರೋಗಗ್ರಸ್ಥರಾದರು. ಮಗ ಮತ್ತು ಪತಿ ಇಬ್ಬರೂ ವೈದ್ಯರು. ವೈದ್ಯಕೀಯ ಸಹಾಯ ಅತಿ ಶ್ರೇಷ್ಠ ತರಗತಿಯಲ್ಲಿ ಸಿಕ್ಕಿದರೂ, ದೇವರು ಭಾರತದ ಕೋಗಿಲೆಯನ್ನು ತನ್ನೆಡೆಗೆ ಕರೆದುಕೊಂಡುಬಿಟ್ಟನು. ಸರೋಜಿನಿ ನಾಯ್ಡು ಭಾರತಕ್ಕಿಲ್ಲ ವಾದರು. ಭಾರತದ ಕೋಗಿಲೆಯು ಹಾಡುವುದನ್ನು ಕೇಳದಹಾಗಾಯ್ತು. ಇಡೀ ಭಾರತವೇ ಏಕೆ, ಪ್ರಪಂಚವೇ ಕಣ್ಣೀರಿಟ್ಟಿತು. "ಅನರ್ಘ್ಯ ರತ್ನ ವೊಂದನ್ನು ಕಳೆದುಕೊಂಡೆವು" ಎಂದರು ನೆಹರು. "ಕಾವ್ಯನಿಧಿಯು ನಮಗಿನ್ನಿಲ್ಲವಾದರು" ಎಂದರು ರಾಜಾಜಿ. ಸರೋಜಿನಿ ಭಾರತೀಯ ರೆಲ್ಲರನ್ನೂ ದುಃಖಸಾಗರದಲ್ಲಿ ಮುಳುಗಿಸಿ ಜೀವನಯಾತ್ರೆ ಮಾಡಿಬಿಟ್ಟರು.

ಆದರೆ ಸರೋಜಿನಿ, 'ತಂದೆಯಂತೆ ಮಗ, ತಾಯಿಯಂತೆ ಮಗಳು' ಎಂಬ ನಾಣ್ನುಡಿಯನ್ನು ಸಾರ್ಥಕಮಾಡಿರು. ಸರೋಜಿನಿ ಉತ್ತರಪ್ರದೇಶದ ರಾಜ್ಯಪಾಲರಾಗಿದ್ದರೆ, ಅವರ ಮಗಳು ಶ್ರೀಮತಿ ಪದ್ಮಜಾ ನಾಯ್ಡು, ಇಂದು ಪಶ್ಚಿಮ ಬಂಗಾಳದ ರಾಜ್ಯಪಾಲರಾಗಿದ್ದಾರೆ.

ಶಾಂತಿದೂತೆ ಸರೋಜಿನಿದೇವಿಯು ನಮಗಿನ್ನಿಲ್ಲವಾದರೂ, ಆಕೆಯ ಕವಿತಾವಾಣಿಯು ವಿಶ್ವಸಾಮ್ರಾಜ್ಯದ ಸೌಹಾರ್ದದ ಕಾವ್ಯವಾಹಿನಿಯಾಗಿ ಹರಿಯಲಿ; ಭಾರತ ಹಿಗ್ಗಲಿ; ಪ್ರಪಂಚ ಅವರನ್ನು ಸ್ಮರಿಸಲಿ.



# ಕಸ್ತೂರಿ ಬಾ

## 'ಕಂಬನಿಗೆ ಇಂಬಿಲ್ಲ, ಸಮರ ಸಮಯವಿದು'

"ಬರುವವರು ಹೇಳದಿಹ, ಇರುವವರು ಕಾಣದಿಹ, ಹೋದವರು ಬಾರದಿಹ ಸಾವಿನ ನಾಡು ಇಂದು ಕಸ್ತೂರಿಬಾನ ಬೀಡು" ಹುಟ್ಟಿದ ಸೂರ್ಯನು ಮುಳುಗಲೇಬೇಕು. ಅಂತೆಯೇ ಕಸ್ತೂರಿಬಾ. ಬಾ ಇಂದು ನಮ್ಮನ್ನಗಲಿದ್ದಾರೆ. ಸಾವಿನ ಮಾಯಾಮುಸುಕಿನ ಪರದೆಯ ಒಳಗೂ ಜೀವವಿದೆ, ಆತ್ಮವಿದೆ ಎಂದು ನಂಬುವುದಾದರೆ, ಕಸ್ತೂರಿಬಾ ಚಿರಂಜೀವಿ. ಸಾಬರಮತಿ, ಸೇವಾಗ್ರಾಮ, ಏಕೆ ಇಡೀ ಭರತಭೂಮಿಯ ಪ್ರತಿಯೊಂದು ಧೂಳಿನ ಕಣದಲ್ಲಿಯೂ ಬಾ, ಮೂರ್ತಿಮತ್ತಾಗಿದ್ದಾರೆ ಎಲೆಮರೆಯ ಕಾಯಂತೆ ತೆರೆಯ ಮರೆಯಲ್ಲಿಯೇ ಅಗಾಧವಾದ ಮೂಕಸೇವೆ ಸಲ್ಲಿಸಿದ್ದಾರೆ. ಗಾಂಧೀಜಿ ಭಾರತದ ಅನಭಿಷಿಕ್ತ ಚಕ್ರವರ್ತಿ. ಅವರ ಪಕ್ಕದಲ್ಲಿ ಬಾಗೆ ಶೂನ್ಯ ಸಿಂಹಾಸನ ಮೀಸಲು.

ಕಸ್ತೂರಿಬಾನ ಬಾಳಿನಲ್ಲಿ ಬೆಳಗಿನಿಂದ ಹಿಡಿದು ಸಂಜೆಯವರೆಗೂ ನಮಗೆ ಎದ್ದು ಕಾಣುವುದು ತ್ಯಾಗಮಯ ಜೀವನ. ಸಂಸಾರ ಜೀವನದ ಸುಖದ ಬಂಧನಗಳನ್ನು ಕಿತ್ತೊಗೆದು ಇಡೀ ಜಗತ್ತಿಗೆ ಒಬ್ಬ ಮಹಾತ್ಮನನ್ನು ಒದಗಿಸಿಕೊಟ್ಟ ಸಾಧ್ವೀಮಣಿ ಆಕೆ ಶಾರದಾಮಣಿದೇವಿ ಶ್ರೀ ರಾಮಕೃಷ್ಣ ಪರಮಹಂಸರ ಬಾಳದೀವಿಗೆಯಾಗಲಿಲ್ಲವೆ! ಕಸ್ತೂರಿಬಾನ ತ್ಯಾಗ, ಸಹಕಾರ ವಿಲ್ಲದಿದ್ದರೆ ಇಂದು ನಮಗೆ ಮಹಾತ್ಮರ ಮಹಾತ್ಮೆ ಬಯಲಿಗೆ ಬರುತ್ತಿತ್ತೋ ಇಲ್ಲವೋ! ಗಾಂಧೀಜಿಯ ಸತ್ಯಾಗ್ರಹದ ಎಲ್ಲ ತಪಸ್ಸುಗಳಲ್ಲಿಯೂ ಕಸ್ತೂರಿ ಬಾ ಪ್ರಯೋಗವಸ್ತು, ಸತ್ಯಾಗ್ರಹದ ತಪಃಸಿದ್ಧಿ ಗಾಂಧೀಜಿಗೆ ಎಷ್ಟೋ ಬಾಗೂ ಅಷ್ಟೆ. ಗಾಂಧೀಜಿಗಿಂತ ಒಂದು ಕೈಮೇಲೆಂದರೂ ತಪ್ಪಾಗಲಾರದು.

ಯೋಗಿನಿ ಕಸ್ತೂರಿಬಾ, ಸಾವಿನ ನಾಡಿಸಿಂದಲೇ ಗಾಂಧೀಜಿಯ ತಪಸ್ಸಿಗೆ ಕಸ್ತೂರಿಯ ಪರಿಮಳ ಬೀರುತ್ತಲಿದ್ದಾರೆ.

ಆಗಾಖಾನ ಅರಮನೆಯಲ್ಲಿ-ಸೆರೆಮನೆಯಲ್ಲಿ-ಕಸ್ತೂರಿಬಾನ ಅನಂತ ಅಗಲಿಕೆ ದೇಶಕ್ಕೆ ಕೊಡಲಿಯಪೆಟ್ಟು. ನುಂಗಲಾರದ ಕಹಿತುತ್ತು. ಸಹಿಸ ಲಾರದ ನೋವು. "ಸಾವಿಲ್ಲಪೆಡೆಯಿಲ್ಲ" ನಿಜ. ಆದರೆ ಬಾಗೆ ಸೆರೆಮನೆ ಯಲ್ಲಿ ಸಾವು ಬರಬೇಕಾದ್ದಿರಲಿಲ್ಲ. "ಬದುಕು ಜಟಕಾ ಬಂಡಿ. ವಿಧಿ ಅದರ ಸಾರಥಿ". ವಿಧಿಯೆಂಬ ಸಾರಥಿ ಬಿಟ್ಟಕಡೆ ಗಾಡಿ ಉರುಳಬೇಕು. ಆದರೆ ವಿಧಿ ಕಸ್ತೂರಿಬಾನ ಬಾಳಿನ ಕೊನೆಯ ದಿನಗಳನ್ನು ಸೆರೆಮನೆಯಲ್ಲಿ ನೋಡಬೇಕಿತ್ತೆ? ಅಂತೂ ಕಸ್ತೂರಿಬಾ ಇಂದು ನಮಗಿಲ್ಲ. ಭಾರತ ಇಂದು ತಾಯನ್ನು ಕಳೆದುಕೊಂಡ ತಬ್ಬಲಿ. ಭಾರತದ ಹಿರಿಯ ಮಗಳು ಸ್ವಾತಂತ್ರ್ಯ ಕ್ಕಾಗಿ ದೇಹಸವೆಸಿ ಕರಗಿಹೋದಳು.

ಗಾಂಧೀಜಿಯ ಚಿಕ್ಕಪ್ಪನ ಮಗ, ಮಗನಲಾಲಗಾಂಧಿ ತೀರಿಕೊಂಡಾಗ ಗಾಂಧೀಜಿ ಹೇಳಿದರು: "ವಿಧವೆಯಾದದ್ದು ಮಗನಭಾಯಿಯ ಹೆಂಡತಿ ಯಲ್ಲ, ನಾನು" ಎಂದು. ಅಂತೆಯೇ ಬಾನ ಸಾವಿನ ತಾಪ ಬಾಪೂಜಿಗಷ್ಟೇ ಅಲ್ಲ, ಇಡೀ ದೇಶಕ್ಕೆ. ಇಡೀ ಭಾರತವೇ ತಬ್ಬಲಿಯಾಗಿದೆ.

೧೯೪೨ನೇ ಆಗಸ್ಟ್ ೯ನೇ ತಾರೀಖು ದೇಶದಲ್ಲೆಲ್ಲಾ ಕೋಲಾಹಲ. ಬೊಂಬಾಯಿನಲ್ಲಿ ಅಖಿಲಭಾರತ ಕಾಂಗ್ರೆಸ್ ನೆರೆದಿತ್ತು. ಭಾರತದ ಮುಂದಿನ ರಾಜಕೀಯ ಭವಿಷ್ಯವನ್ನು ತೀರ್ಮಾನಮಾಡಿ ದೇಶಕ್ಕೆ 'ಸ್ವಾತಂತ್ರ್ಯದ ಘೋಷಣೆ'ಯನ್ನು ಕೊಟ್ಟಿತು. ಅಂದೇ ಬೆಳಿಗ್ಗೆ ಮಹಾತ್ಮಾಜೀ, ಕಾಂಗ್ರೆಸ್ ಅಧ್ಯಕ್ಷ ಅಜಾದ್, ಜವಹರಲಾಲ್ ನೆಹರು ಮುಂತಾದ ನಾಯಕರೆಲ್ಲರನ್ನೂ ಸೆರೆಹಿಡಿದರು. ಗಾಂಧೀಜಿಯ ಜೊತೆಗೆ ಕಸ್ತೂರಿಬಾ ಬೇಕಾದರೆ ಹೋಗ ಬಹುದೆಂದು ಸರಕಾರ ತಿಳಿಸಿತು. ಬಾ ಹೇಳಿದರು "ನನಗೆ ಆ ದಾಕ್ಷಿಣ್ಯ ಬೇಡ, ನಾನು ಮಾಡಬೇಕಾದ ಕೆಲಸ ಇನ್ನೂ ಬೇಕಾದಷ್ಟಿದೆ" ಎಂದು. ಬೊಂಬಾಯಿನ ಶಿವಾಜಿಪಾರ್ಕಿನಲ್ಲಿ ಗಾಂಧೀಜಿ ಮಾತನಾಡಬೇಕಾಗಿತ್ತು ಅಂದು. ಅವರ ಬದಲು ಬಾ ತಾನೇ ಮಾತನಾಡುತ್ತೇನೆಂದರು. ಬಾನ ಬಾಯಿಂದ ಆ ಮಾತುಗಳು ಹೊರಡುವ ಮುನ್ನವೇ ದಸ್ತಗಿರಿಮಾಡಿ ಬಾಪೂನ ಜೊತೆ ಸೇರಿಸಿದರು. ಆಗಾಖಾನ ಸೆರೆಮನೆಯಲ್ಲಿಯೇ ಕುಳಿತುಕೊಂಡು ತನ್ನ

ಮಕ್ಕಳ ಜೈತ್ರಯಾತ್ರೆಯನ್ನು ಹರಸುತ್ತಿದ್ದರು. ಸ್ವಾತಂತ್ರ್ಯಕ್ಕಾಗಿ ತನ್ನ ಲಕ್ಷಾಂತರ ಮಕ್ಕಳು ಬಲಿದಾನ ಕೊಡುವುದನ್ನೂ, ಬಿಸಿರಕ್ತವನ್ನು ಗುಂಡಿ ನೇಟು; ಲಾಠಿ, ಬಂದೂಕುಗಳಿಗೆ ಉಣಿಸಿದುದನ್ನೂ ತನ್ನ ಮೂಕ ಕಣ್ಣಿನಿಂದ ಸೆರೆಮನೆಯ ಗೋಡೆಗಳ ರಂಧ್ರದಿಂದ ನೋಡುತ್ತಿದ್ದರು. ಸ್ವಾತಂತ್ರ್ಯದ ದೇವಸ್ಥಾನದಲ್ಲಿ, ಸ್ವರಾಜ್ಯ ಲಕ್ಷ್ಮಿಯ ಪೂಜೆಗಾಗಿ ಬಾ ನಂದಾದೀಪಹಚ್ಚುವ ಭಾಗ್ಯಕ್ಕಾಗಿ ಭಾರತದ ಮಕ್ಕಳೆಲ್ಲಾ ತಮ್ಮ ರಕ್ತವನ್ನೇ ಚೆಮ್ಮಿದರು. ತಮ್ಮ ರುಂಡಮುಂಡಗಳನ್ನೇ ಬಲಿದಾನಮಾಡಿದರು. ನಂದಾದೀವಿಗೆಗೋಸುಗ, ತಮ್ಮ ಕೈಕಾಲುಗಳನ್ನೇ ಎರವಲುಕೊಟ್ಟರು. ನಂದಾದೀಪದ ಎಣ್ಣೆಗಾಗಿ ರಕ್ತವನ್ನೇ ಚೆಮ್ಮಿದರು. ಆದರೆ ದೇವಿ ಭಾರತಿ, ಸ್ವರಾಜ್ಯಲಕ್ಷ್ಮಿ ವಿಜಯ ಮಾಲೆಯನ್ನು ಹಾಕಿಕೊಳ್ಳುವ ಮುನ್ನವೇ, ನಂದಾದೀಪವನ್ನು ಹಚ್ಚುವ ಮುನ್ನವೇ ಕಸ್ತೂರಿಬಾ ನಿರಂತರ ಶಾಂತಿಯನ್ನೈದಿದರು.

ಗೀತೆಯ ನುಡಿಯಂತೆ " ಸುಖದುಃಖಗಳ ಸಂಕೋಲೆಯಿಂದ ಬೇರೆ ಯಾದ ಮನುಷ್ಯನೇ ಜೀವನ್ಮುಕ್ತ" ಎಂದು ತಿಳಿದ ಗಾಂಧೀಜಿ ಕಸ್ತೂರಿಬಾ ತೀರಿಕೊಂಡಾಗ ಒಂದು ಹನಿ ಕಣ್ಣೀರನ್ನೂ ಹಾಕದೆ, ಕಸ್ತೂರಿಬಾ ಸಂಪೂರ್ಣ ವಾಗಿ ಅಗ್ನಿಯನ್ನಾಲಂಗಿಸಿಕೊಳ್ಳುವವರೆಗೂ ತಮ್ಮ ಆಸರೆಯಾದ ಊರು ಗೋಲನ್ನು ಹಿಡಿದುಕೊಂಡು ೬೨ ವರ್ಷಗಳ ವರೆಗೆ ಜೀವನದ ಬಾಳನೌಕೆ ಯನ್ನು ಕಷ್ಟಸುಖಗಳಲ್ಲಿ ತೇಲಿಸಿಕೊಂಡು ಹೋದ ಕಸ್ತೂರಿಬಾನ್ನ ಅಗಲ ಲಾರದೆ ನಿಂತುಕೊಂಡಿದ್ದರು. ಆಗಾಖಾನ ಅರಮನೆಯ ಮೂಲೆಯೊಂದರಲ್ಲಿ ಕುಳಿತುಕೊಂಡಿದ್ದರೂ, ಧನ್ವಂತರಿಯಂತೆ, ದೇಶದ ನಾಡಿಯ ಮಿಡಿತವನ್ನು ತಿಳಿದ ಗಾಂಧೀಜಿ " ಕಂಬನಿಗೆ ಇಂಬಿಲ್ಲ; ಸಮರ ಸಮಯವಿದು " ಎಂದು ಸುಮ್ಮನಿದ್ದಿರಬಹುದೆ? ಕಣ್ಣಿನಲ್ಲಿ ನೀರು ಬಂದರೇನೇ ದುಃಖವನ್ನು ತೋರಿಸಿ ದಂತಾಯಿತೇನು ? ಬಾಪು ಮತ್ತು ಬಾನ ಸಂಬಂಧ ಉಚ್ಚ ರೀತಿಯದು. ಗಾಂಧೀಜಿಯೇ ಹೇಳಿದಂತೆ " ಈ ಜೀವಿತ ತೀವ್ರ ಯಾತನೆಯಿಂದ ಆಕೆ ವಿಮುಕ್ತಳಾಗಬೇಕೆಂಬ ದೃಷ್ಟಿಯಿಂದ ಆಕೆಯ ಸಾವನ್ನು ನಾನು ಸ್ವಾಗತಿಸು ವುದಾದರೂ, ಆಕೆಯ ಸಾವಿನಿಂದ ನಾನು ಮೊದಲು ಭಾವಿಸಿದುದಕ್ಕಿಂತಲೂ ಹೆಚ್ಚ ನಷ್ಟ ಸಂಭವಿಸಿದೆ. ೧೯೦೬ರಲ್ಲಿ ನಾವಿಬ್ಬರೂ ಪರಸ್ಪರ ಒಪ್ಪಂದ ಮಾಡಿಕೊಂಡು ಆತ್ಮ ಸಂಯಮವನ್ನು ಆಗಿನಿಂದ ಪಾಲಿಸಿಕೊಂಡು ಬರು

ತಿದ್ದೇವೆ. ಇದರಿಂದ ನಮ್ಮ ಅನುರಾಗ ಮೊದಲಿಗಿಂತಲೂ ಹೆಚ್ಚಾಗಿ ಬೆಳೆಯಿತು. ಆಕೆ ನನ್ನ ನಿಜವಾದ ಸಹಧರ್ಮಿಣಿ ಎಂಬುದು ಇನ್ನೂ ಚೆನ್ನಾಗಿ ದೃಢಪಟ್ಟಿತು. ಅಹಿಂಸಾಯುತವಾದ ಅಸಹಕಾರವನ್ನು ಕಲಿಯುವುದರಲ್ಲಿ ಆಕೆ ನನಗೆ ಗುರುವಾದಳು. ನನ್ನ ಮನೆಯಲ್ಲೇ ನಾನು ಅದನ್ನು ಜಾರಿಗೆ ತರಲು ೧೯೦೬ರಿಂದ ಪ್ರಾರಂಭವಾಯಿತು. ಈ ಪದ್ಧತಿಯನ್ನು ನಾನು ಮೊದಲು ರಾಜಕೀಯರಂಗದಲ್ಲಿ ಉಪಯೋಗಿಸಿದಾಗ, ಅದಿನ್ನೂ ಪ್ರವರ್ಧಮಾನಕ್ಕೆ ಬಂದು "ಸತ್ಯಾಗ್ರಹ" ಸ್ವರೂಪ ಪಡೆಯಿತು. ದಕ್ಷಿಣ ಅಫ್ರಿಕದಲ್ಲಿ ಕಸ್ತೂರಿಬಾ ಅನೇಕವೇಳೆ ಸೆರೆಮನೆವಾಸವನ್ನು ಅನುಭವಿಸಿದರು.

ಆದರೆ ಇತ್ತೀಚೆಗೆ ನನ್ನನ್ನು ಸೆರೆಹಿಡಿದಾಗ ಆಕೆ ಅದಕ್ಕೆ ಸಿದ್ಧಳಾಗಿ ಇರಲಿಲ್ಲ. ಸರ್ಕಾರದವರು ನನ್ನ ಅಹಿಂಸಾತತ್ವದಲ್ಲಿ ನಂಬಿಕೆಯನ್ನಿಟ್ಟು ಕೊಂಡಿದ್ದಾರೆಂದೂ, ನಾನಾಗಿಯೇ ಸೆರೆಮನೆಗೆ ಹೋಗುವ ಕಾರ್ಯಕ್ರಮ ಕೈಗೊಂಡರೆ ಆಗ ಸರ್ಕಾರದವರು ನನ್ನನ್ನು ಬಂಧಿಸಬಹುದೆಂತಲೂ ಆಕೆಗೆ ಭರವಸೆಕೊಟ್ಟೆ. ಆದರೆ ಆಕೆಯನ್ನು ಇತರರೊಂದಿಗೆ ಬಂಧಿಸಿದ ಮೇಲೆ ಸೆರೆಮನೆಯಲ್ಲಿ ಆಕೆಗೆ ಆಮಶಂಕೆ ಪ್ರಾರಂಭವಾಯಿತು. ಆಕೆಯಂತೆಯೇ ಸೆರೆಮನೆವಾಸವನ್ನನುಭವಿಸುತ್ತಿರುವ ಡಾ॥ ಸುಶೀಲಾನಾಯರ್ ಆಕೆಗೆ ವೈದ್ಯೋಪಚಾರ ಮಾಡಿದ್ದರಿಂದಲೂ, ನಾನಾಕೆಯ ಪಕ್ಕದಲ್ಲಿದ್ದುದರಿಂದಲೂ ಆ ವ್ಯಾಧಿ ಅಷ್ಟಕ್ಕೆ ನಿಂತಿತು. ಆದರೆ ಆಕೆಯ ದೇಹ ದಿನದಿನಕ್ಕೂ ಕೃಶವಾಯಿತು; ಕೊನೆಗೆ ದೈವಾಧೀನಳಾದಳು. ಆದರೆ ಆಕೆಯ ವಿಚಾರದಲ್ಲಿ ಸರಕಾರದ ಪರವಾಗಿ ಮಾಡಲ್ಪಟ್ಟಿರುವ ವರದಿ ನಿಜಾಂಶದಿಂದ ದೂರವಾಗಿದೆ. ಯುದ್ಧದಲ್ಲಿ ಮೊದಲ ಹತ್ಯ ಸತ್ಯಕ್ಕೆ ನಿಜ. ಆದರೂ ಬ್ರಿಟಿಷರು ಸತ್ಯಕ್ಕೆ ತಪ್ಪಿ ನಡೆಯಬೇಕೆ?"

## ಜೀವನ

ಪೋರ್ ಬಂದರಿನ ಪುಣ್ಯ. ಅದು ಬಾ ಮತ್ತು ಬಾಪೂಜಿಗೆ ಜನ್ಮಸ್ಥಳ. ಬಾ ಹಿರಿಯರೋ ಬಾಪೂಜಿ ಹಿರಿಯವರೋ, ಆ ಗೊಂದಲ ನಮಗೇಕೆ?

ನಮಗೆ ಇಬ್ಬರೂ ಹಿರಿಯರು. ಇಬ್ಬರಿಗೂ ಸಮವಯಸ್ಸು ಇತ್ತೆಂದು ತಿಳಿದರೆ ಸಾಕು. ಬಾಪೂನ ತಂದೆ, ಬಾ ನ ತಂದೆ ಇಬ್ಬರೂ ಗೆಳೆಯರು. ಗೆಳೆತನ ಬಾಂಧವ್ಯದಲ್ಲೂ ಕೂಡ ಏಕೆ ಬೆರೆಯಬಾರದೆಂದು ಯೋಚಿಸಿ, ಬಾ ನ ಮದುವೆ ಬಾಪೂನೊಂದಿಗೆ ಆಯಿತು. ಇದು ನಡೆದುದು ಅವರು ಕೇವಲ ಚಿಕ್ಕ ವಯಸ್ಸಿನಲ್ಲಿದ್ದಾಗ, ೧೩ರ ಅಂಚನ್ನು ಆಗತಾನೆ ದಾಟಿದ್ದಾಗ.

ಬಾ-ಬಾಪೂಜಿಯ ದಾಂಪತ್ಯಜೀವನದ ವೈಶಿಷ್ಟ್ಯವೇ ಬೇರೆ. ಬಾಪೂ ಯಾವಾಗಲೂ ಗಂಡನ ಅಧಿಕಾರವನ್ನು ಹೆಂಡತಿಯ ಮೇಲೆ ಚಲಾಯಿಸಬೇಕು ಎಂಬ ಅಭಿಮತದವರಾಗಿದ್ದರು. ತಮ್ಮ ಕಣ್ಣೆದುರಿನಲ್ಲಿಯೇ ಬಾ ಯಾವಾಗಲೂ ಇರಬೇಕೆಂದು ಬಾಪೂ ಇಷ್ಟಪಡುತ್ತಿದ್ದರು. ತಮ್ಮನ್ನು ಹೇಳದೆ ಕೇಳದೆ ಎಲ್ಲಿಗೂ ಹೋಗಲು ಬಾ ಗೆ ಅವಕಾಶವಿರಲಿಲ್ಲ ಬಾ ಮೊದಲಿನಿಂದಲೂ ಸ್ವಾತಂತ್ರ್ಯಪ್ರೇಮಿ. ನ್ಯಾಯ ಕಂಡುಬಂದ ಕೆಲಸಗಳನ್ನು ಸ್ವತಂತ್ರವಾಗಿಯೇ ಬಾಪೂನ್ನ ಕೇಳದೆಯೇ ಮಾಡುತ್ತಿದ್ದರು. ಬಾಪೂಗೆ ಕೋಪತಾಪಗಳು ಬಂದು ವಿರಸವಾದ ಪ್ರಸಂಗಗಳೆಷ್ಟೋ. ಕಸ್ತೂರಿಬಾಗೆ ಗಾಂಧೀಜಿಯೇ ಗುರು. ಅಕ್ಷರ ಕಲಿಸಿದ ಪುಣ್ಯ ಗಾಂಧೀಜಿಯವೇ. ಇದರ ವಿಷಯದಲ್ಲಿ ಮನೆಯಲ್ಲಿ ಎಷ್ಟೋ ವಾಗ್ಯುದ್ಧ. ಆದರೆ ಕೊನೆಯ ವಿಜಯ ಗಾಂಧೀಜಿಯದೇ.

ಕಸ್ತೂರಿಬಾನ ದಾಂಪತ್ಯಜೀವನ ಬಾಲ್ಯದಲ್ಲಿಯೇ ಆರಂಭವಾದುದರಿಂದ ೧೬ನೇ ವಯಸ್ಸಿನಲ್ಲಿಯೇ ಚೊಚ್ಚಲು ಮಗುವಿನ ಸಾವನ್ನು ಅನುಭವಿಸಬೇಕಾಗಿ ಬಂತು. ಸ್ವಲ್ಪ ದಿನಗಳ ಮೇಲೆ ಇನ್ನೊಂದು ಮಗು, ಗಂಡು ಸಂತಾನವಾಯಿತು. ಅವರ ಸಂತೋಷಕ್ಕೆ ಪಾರವೇ ಇರಲಿಲ್ಲ. ಗಾಂಧೀಜಿ ಆಗತಾನೆ ವಿದ್ಯಾಭ್ಯಾಸಕ್ಕೆ ಇಂಗ್ಲೆಂಡಿಗೆ ಹೋಗಲೇಬೇಕಾಗಿದ್ದುದರಿಂದ ಅಗಲಿಕೆಯ ದುಃಖವು ಅವರಿಗೆ ಸುಖದುಃಖದ ಬೇವುಬೆಲ್ಲ. ಪತಿಪರಾಯಣೆಯಾದ ಬಾ, ಗಾಂಧೀಜಿ ಬರುವವರೆಗೂ ತಮ್ಮ ಅತ್ತೆಯ ಮನೆಯಲ್ಲಿಯೇ ಇದ್ದರು. ಗಾಂಧೀಜಿ ಇಂಗ್ಲೆಂಡಿನಿಂದ ಬಂದ ಮೇಲೂ ಅದೆಷ್ಟು ಸಂಶಯದ ಗುಳಿಗೆಗಳನ್ನು ನುಂಗಿದರೋ ಕಸ್ತೂರಿಬಾನ ವಿಷಯದಲ್ಲಿ. ಅದರ ಕಟು ಪರಿಣಾಮ ಕಸ್ತೂರಿಬಾ ಧೈರ್ಯದಿಂದ ಎದುರಿಸಿದರು. ಇದಕ್ಕೆಲ್ಲ ಕಾರಣ

ಗಾಂಧೀಜಿಯವರಲ್ಲಿ ಕಸ್ತೂರಿಬಾಗೆ ಇದ್ದ ಅಚಲ ನಂಬಿಕೆ ಮತ್ತು ನಿಷ್ಕಳಂಕ ಪ್ರೇಮ.

ಗಾಂಧೀಜಿ ರಾಜಕೋಟೆ, ಬೊಂಬಾಯಿಗಳಲ್ಲಿ ವಕೀಲರಾಗಿ ಆಮೇಲೆ ದಕ್ಷಿಣ ಆಫ್ರಿಕದಲ್ಲಿ ಒಂದು ಕಂಪೆನಿಯ ನ್ಯಾಯ ಸಲಹೆಗಾರರಾಗಿ ಹೋದರು. ಇಷ್ಟರಲ್ಲಿಯೇ ಇನ್ನೊಂದು ಮಗುವೂ ಆಗಿತ್ತು. ಹೆಂಡತಿ ಮಕ್ಕಳನ್ನು ಬಿಟ್ಟುಹೋಗುವ ಪ್ರಸಂಗ ಬಂದಿತು. ಆಗ ಆದ ಅಗಲಿಕೆಯು ಕಸ್ತೂರಿಬಾ ಗೆ ಇನ್ನೆಂದೂ ಆಗಿರಲಿಲ್ಲ. ಸಂಸಾರದ ಸ್ಥಿತಿಗತಿಗಳು ಒಂದು ಹದಕ್ಕೆ ಬಂದು, ಗಂಡಹೆಂಡಿರು ಒಬ್ಬರನ್ನೊಬ್ಬರು ಅರಿತುಕೊಂಡು ಆಗ ತಾನೇ ಬಾಳಿನ ನೌಕೆಯನ್ನು ಸಾಗಿಸಿಕೊಂಡು ಹೋಗುತ್ತಿದ್ದಾಗ ಅಗಲಿಕೆ ಯನ್ನು ಅನುಭವಿಸಬೇಕಾಗಿ ಬಂದು ಕಸ್ತೂರಿಬಾ ಕರಗಿಹೋದರು.

ಕೆಲಕಾಲ ಕಳೆಯಿತು. ಗಾಂಧೀಜಿ ದಕ್ಷಿಣ ಆಫ್ರಿಕಾದಲ್ಲಿ ಇರುವ ಸಂಭವ ಬಂದಿತು. ಸರಿ, ಸಂಸಾರವನ್ನು ಅಲ್ಲಿಯೇ ಹೂಡುವ ಯೋಚನೆ ಮಾಡಿದರು. ಭಾರತಕ್ಕೆ ಬಂದು ಹೆಂಡತಿ ಮಕ್ಕಳನ್ನು ಕರೆದುಕೊಂಡು ದಕ್ಷಿಣ ಆಫ್ರಿಕಾಕ್ಕೆ ಪ್ರಯಾಣಮಾಡಿದರು. ಗಾಂಧಿಜಿಯ ಸತ್ಯಾಗ್ರಹದ ಪ್ರಯೋಗಶಾಲೆ ದಕ್ಷಿಣ ಆಫ್ರಿಕಾದಲ್ಲಿಯೇ, ಅವರ ಮನೆಯಲ್ಲೇ ಮೊದಲು ಪ್ರಾರಂಭವಾಯಿತು. ಕಸ್ತೂರಿಬಾನೇ ಪ್ರಯೋಗದ ವಸ್ತು. ಹೆಗಲಿಗೆ ಹೆಗಲು ಕೊಟ್ಟು ಪ್ರಯೋಗಗಳನ್ನು ನಡೆಯಿಸಲು ಸಹಾಯಕರಾದರು. ಹರಿಜನ ಅತಿಥಿ, ಊಟಕ್ಕೆ ಬಂದಿದ್ದಾಗ ಹಿಂದೂಧರ್ಮದ ಅಸ್ಪೃಶ್ಯತೆಯ ಮೂಢನಂಬಿಕೆಯನ್ನು ತೊರೆದು ಅದೆಷ್ಟು ತ್ಯಾಗ ತೋರಿಸಿದರು! ಆ ಅತಿಥಿ ಯನ್ನು ಸರಿಸಮಾನರೆಂದು ತಿಳಿದು ಅಡಿಗೆಯ ಮನೆಯಲ್ಲಿಯೇ ಊಟಕ್ಕೆ ಬಡಿಸಿದರು. ರಕ್ತಕ್ಷಯ ಬಂದು ಸಾವು ಇಲ್ಲವೇ ಜೀವ ಎಂದಾಗ ಮಾಂಸದ ಚಹವನ್ನು ಮುಟ್ಟದೆ ಗಾಂಧೀಜಿಯ ಮಾತು ಕೇಳಿದಾಗ ಅವರು ತೋರಿಸಿದ ತ್ಯಾಗ ಅಸಾಧಾರಣವಾದುದು. ಮೊಟ್ಟಮೊದಲನೆಯ ಸಲ ಸ್ತ್ರೀಯರಿಗೆಲ್ಲಾ ಮುಂದಾಳುವಾಗಿ ಸತ್ಯಾಗ್ರಹವನ್ನು ಆಚರಿಸಿ ಸೆರೆಮನೆ ಯನ್ನು ಸೇರಿದಾಗ ಅವರು ತೋರಿಸಿದ ಧೈರ್ಯ ಅಸಮಾನವಾದುದು. ಫೋನಿಕ್ಸ್ ಪಾರ್ಕಿನಲ್ಲಿ ಆಶ್ರಮವನ್ನು ಸ್ಥಾಪಿಸಿ, ಬ್ರಹ್ಮಚರ್ಯೆಯ ವ್ರತ ವನ್ನು ಕೈಗೊಂಡಾಗ ಕಸ್ತೂರಿಬಾ ಕೊಟ್ಟ ಸಹಕಾರ ಮಹತ್ ಸಿದ್ಧಿಯ

ಹಂತದ ಅಡಿಗಲ್ಲು. ಪರಸ್ಪರ ಒಡಂಬಡಿಕೆಯಿಂದ ಬ್ರಹ್ಮಚರ್ಯವನ್ನು ಪಾಲಿಸಲು ನಿರ್ಧರಮಾಡಿದರು. ಇಲ್ಲಿಯವರೆಗೆ ಇದ್ದ ಕಾಮ ಪ್ರೇಮ, ಕಾಮವಾಸನೆಯಿಂದ ಮುಕ್ತಿಹೊಂದಿ ಪರಿಶುದ್ಧವಾದ ಪವಿತ್ರ ಪ್ರೇಮವಾಗಿ ಮಾರ್ಪಾಟಾಯಿತು; ಕಸ್ತೂರಿಬಾ ಇದನ್ನು ಕಂಡುಕೊಂಡರು; ಗಾಂಧೀಜಿ ತಿಳಿಸಿಕೊಟ್ಟರು. ಆದ್ದರಿಂದಲೇ ಅವರ ಬ್ರಹ್ಮಚರ್ಯ ಕೊನೆಯವರೆಗೂ ಆಚಂದ್ರಾರ್ಕವಾಗಿ ಬೆಳೆದುಬಂತು. ದಕ್ಷಿಣ ಆಫ್ರಿಕಾದಲ್ಲಿ ಅನುಭವಿಸಿದ ಒಂದೊಂದು ಕಷ್ಟವೂ ಒಂದೊಂದು ಅನುಭವದ ಅಣಿಮುತ್ತು, ರಸಸಿದ್ಧಿಯ ಘಟ್ಟ.

೧೯೧೪ನೇ ವರ್ಷ ಮಹಾಯುದ್ಧ ಪ್ರಾರಂಭವಾದಾಗ ಕಸ್ತೂರಬಾ ಆಫ್ರಿಕಾದ ಅನುಭವಗಳೊಡನೆ ಭಾರತಕ್ಕೆ ಬಂದರು. ಸಾಬರಮತಿ ಆಶ್ರಮವನ್ನು ಕಟ್ಟಲು ಸಹಾಯಕರಾಗಿ, ಅಂದಿನಿಂದಲೂ ಆಶ್ರಮದ ಜೀವಿಯಾಗಿದ್ದರು ಕಸ್ತೂರಬಾ. ಕಷ್ಟನಿಷ್ಠೂರವಾದ ಜೀವನ ಬಾಗೆ ಮೊದ ಮೊದಲು ನಡೆಸಲು ಸಾಧ್ಯವಾಗಲಿಲ್ಲವೇನೋ ನಿಜ. ಆದರೆ ಪತಿಸಾನ್ನಿಧ್ಯ ಎಲ್ಲವನ್ನೂ ಸಹಿಸುವಂತೆ ಮಾಡಿದುದೂ ಅಲ್ಲದೆ ಕೊನೆಗೆ ಅದನ್ನೇ ತನ್ನ ದನ್ನಾಗಿ ಮಾಡಿಕೊಳ್ಳುವ ಶಕ್ತಿಯನ್ನೂ ಕೊಟ್ಟಿತು. ಇದಕ್ಕೆಲ್ಲಾ ಗಾಂಧೀಜಿ ಯವರ ಆಸರೆಯೇ ಕಾರಣ.

ಮಹಿಳೆಯರ ಪುರೋಭಿವೃದ್ಧಿಯ ವಿಷಯದಲ್ಲಿಯೂ, ಹಳ್ಳಿಗಾಡಿ ನವರ ಮುಂದುವರಿಯುವಿಕೆಯಲ್ಲಿಯೂ ಕಸ್ತೂರಬಾ ಕೆಲಸಮಾಡಲು ಮುಂದೆ ಬಂದರು. ಗಾಂಧೀಜಿ ಜೊತೆಯಲ್ಲಿ ಟೊಂಕಕಟ್ಟಿ ಗ್ರಾಮಸುಧಾರಣೆ ಯಲ್ಲಿ ನೆರವಾದರು. ರಾಜಕೀಯ ಚಳುವಳಿ ಪ್ರಾರಂಭವಾದಾಗ ಕೂಡಾ ಯಾವಾಗಲೂ ಹಿಂದೆ ಬೀಳಲಿಲ್ಲ. ಸೆರೆಮನೆಯ ವಾಸವೂ, ಅಡಿಗೆಮನೆಯ ಕೆಲಸವೂ ಒಂದೇ ಆಗಿತ್ತು ಕಸ್ತೂರಬಾಗೆ. ಗಾಂಧೀಜಿ ಸಾಬರಮತಿಯ ಆಶ್ರಮವನ್ನು ಬಿಟ್ಟು ಸೇವಾಗ್ರಾಮದ ಆಶ್ರಮವನ್ನು ಕಟ್ಟಿದಾಗಲೂ, ಕಸ್ತೂರಬಾ ಆಶ್ರಮದ ತಾಯಾಗಿದ್ದರು. ಗಾಂಧಿಜೀ ದೇಶಕ್ಕೆಲ್ಲಾ ಬಾಪೂ. ಕಸ್ತೂರಬಾ ಗಾಂಧೀಜಿ ನಾಡಿಗೆಲ್ಲಾ ಬಾ.

ಗಾಂಧೀಜಿಯ ಉಪವಾಸಗಳು ಭಾರತದ ರಾಜಕೀಯದಲ್ಲಿ ತನ್ನದೇ ಆದ ಒಂದು ಸ್ಥಾನವನ್ನು ಗಳಿಸಿವೆ. ಗಾಂಧೀಜಿಯ ರಾಜಕೋಟೆಯ

ಉಪವಾಸ, ದಿಗ್ವಿಜಯ ಪಡೆದ ಆಗಾಖಾನ್ ಸೆರೆಮನೆಯ ೨೧ ದಿನಗಳ ಉಪವಾಸ ಪ್ರಪಂಚವನ್ನೆಲ್ಲಾ ಆಶ್ಚರ್ಯಗೊಳಿಸಿವೆ, ದಿಗ್ಭ್ರಮೆ ಹಿಡಿಸಿವೆ. ಈ ಉಪವಾಸಗಳು ನಡೆಯುವಾಗ ಕಸ್ತೂರಬಾ ತೋರಿಸಿದ ಧೈರ್ಯ, ತಾಳ್ಮೆ ಮತ್ತು ಸಹನೆ ಕಸ್ತೂರಬಾನ ಶಕ್ತಿಗೆ ಮೀರಿದುದು. ಬಾ ನ ನೈತಿಕ ಬೆಂಬಲ ಬಾಪೂಜಿಯ ಜಯಕ್ಕೆ ಸಾಧನವಾಯಿತು.

ಬಾಪೂಜೀ ರಾಜಕೋಟೆಯ ವಿಷಯದಲ್ಲಿ ಮಹೋಪವಾಸವನ್ನು ಕೈಗೊಂಡಾಗ ಕಸ್ತೂರಬಾ, ರಾಜಕೋಟೆಯಲ್ಲಿ ಸೆರೆಯಾಗಿದ್ದರು. ಉಪವಾಸದ ಸುದ್ದಿ ಕೇಳಿ ಸೆರೆಮನೆಯಲ್ಲಿಯೇ ಬಾ ಧೈರ್ಯ ತಂದುಕೊಂಡರು. ಸುದೈವದಿಂದ ಉಪವಾಸ ಒಂದು ವಾರದೊಳಗೆ ಮುಕ್ತಾಯವಾದ ಮೇಲೆ ಬಾ ನ ಬಿಡುಗಡೆಯೂ ಆಗಿ ಬಾಪುವನ್ನು ಸೇರಿದರು.

ಅಲ್ಲಿಂದೀಚೆಗೆ ಬಾ, ಸೇವಾಗ್ರಾಮದ ಅಧಿದೇವತೆಯಾಗಿದ್ದರು. ಬಾಗೆ ಬಾಪೂನೇ ಸರ್ವಸ್ವ. ಬಾಪೂ ೧೯೪೨ನೆಯ ಇಸವಿ ಸ್ವಾತಂತ್ರ್ಯದ ಅಲೆಯೆಬ್ಬಿಸಿದಾಗ ಬಾ ಇಂಬುಗೊಟ್ಟರು. ಬಾಪೂನ ಜೊತೆಯಲ್ಲಿಯೇ ಆಗಾಖಾನ್ ಸೆರೆಮನೆ ಸೇರಿದರು. ಆಗಾಖಾನ್ ಅರಮನೆಯೇ ಅವರಿಗೆ ಕೊನೆಯ ನೆಲೆಯಾಯಿತು. ಸಾವಿನ ಸೊಟ್ಟ ಮೋರೆ, ನಾವು ಇನ್ನೊಮ್ಮೆ ಬಾ ನನ್ನು ನೋಡುವಂತೆ ಮಾಡಲಿಲ್ಲ.

## ಬಾ ಮತ್ತು ಬಾಪು

ಬಾಪೂ ತನ್ನ ಆಶ್ರಮದಲ್ಲಿ ತಪ್ಪುಮಾಡಿದವರನ್ನು ಬಹಿರಂಗವಾಗಿ ದಂಡಿಸದೆ ಬಿಟ್ಟೇ ಇಲ್ಲ. ಆಶ್ರಮದಲ್ಲಿ ನಾಳೆಗಾಗಿ ಧನಸಂಗ್ರಹ ಮಾಡಕೂಡದೆಂದು ನಿಯಮ. ಒಂದುಸಲ ಕಸ್ತೂರಿಬಾ ಎರಡು ರೂಪಾಯಿಗಳನ್ನು ತೆಗೆದಿಟ್ಟಿದ್ದರು ಏತಕ್ಕಾದರೂ ಉಪಯೋಗಿಸಲಿಕ್ಕೆಂದು. ಇದು ಬಾಪೂಗೆ ಹೇಗೋ ತಿಳಿಯಿತು. ಸಂಜೆ ಪ್ರಾರ್ಥನೆಯಾದ ಮೇಲೆ ಎಲ್ಲರ ಎದುರಿಗೂ ಕಸ್ತೂರಿಬಾನ್ನ ಬಯಲಿಗೆಳೆದು ದಂಡಿಸಿದರು.

ಬಾನನ್ನು ಬಹಿರಂಗವಾಗಿ ದಂಡಿಸಿದ ಸನ್ನಿವೇಶ ಇನ್ನೊಂದು ಸಂದರ್ಭದಲ್ಲಿ ಬಹಳ ಗಮನಾರ್ಹವಾಗಿದೆ. ೧೯೩೮ನೇ ವರ್ಷ ಏಪ್ರಿಲ್ ತಿಂಗಳಲ್ಲಿ

ಮಹಾತ್ಮರು ಡೇಲಾಂಗಿನಲ್ಲಿ ಆರೋಗ್ಯಧಾಮದಲ್ಲಿರುವಾಗ ಪೂರಿ ದೇವಸ್ಥಾನ ದಲ್ಲಿ ಒಂದು ದೊಡ್ಡ ರಾದ್ಧಾಂತವೇ ನಡೆದು ಹೋಯಿತು. ಗಾಂಧೀಮತದ ಮಹಂತರೆಲ್ಲಾ ಹರಿಜನರಿಗೆ ಪ್ರವೇಶವಿಲ್ಲದ ದೇವಸ್ಥಾನಗಳಲ್ಲಿ ತಾವೂ ಹೋಗಕೂಡದೆಂದು ಒಂದು ಪ್ರತಿಜ್ಞೆಯನ್ನು ತೆಗೆದುಕೊಂಡಿದ್ದಾರೆ. ಪೂರಿ ದೇವಸ್ಥಾನದಲ್ಲಿ ಹರಿಜನರನ್ನು ಬಿಡುವಸಲುವಾಗಿ ಒಂದು ಚಳುವಳಿಯೇ ನಡೆಯಿತು. ಗಾಂಧೀಜಿ ಮಹದೇವಭಾಯಿಯನ್ನು ಕರೆದು, ಕಸ್ತೂರಿಬಾನ್ನ ಮತ್ತು ದುರ್ಗಾಬೇನಳನ್ನು ಪೂರಿ ದೇವಸ್ಥಾನಕ್ಕೆ ಕರೆದುಕೊಂಡು ಹೋಗ ಬೇಕೆಂದು ಹೇಳಿದರು. ಅವರು ದೇವಸ್ಥಾನಕ್ಕೆ ಹೋದಾಗ ಹರಿಜನರು ನಿಲ್ಲುವ ಸ್ಥಳದಲ್ಲಿಯೇ ನಿಂತುಕೊಂಡು ದೇವರ ದರ್ಶನ ತೆಗೆದುಕೊಂಡು ಬರಬೇಕೆಂದು ಗಾಂಧೀಜಿಯ ಅಭೀಷ್ಟವಾಗಿತ್ತು. ಆದರೆ ಗಾಂಧೀಜಿ ಯೋಚಿಸಿದಂತೆ ಆಗಲಿಲ್ಲ. ದುರ್ಗಾಬೆನ್, ಕಸ್ತೂರಿಬಾ, ನಾರಾಯಣ ಎಲ್ಲಾ ಪೂರಿಗೆ ಬಂದರು. ದೇವರ ಎದುರಿನಲ್ಲಿ ಪ್ರತಿಜ್ಞೆಯನ್ನು ಮರೆತರು. ನಾರಾಯಣನ ವಿನಾ ಎಲ್ಲಾ ದೇವಸ್ಥಾನಮೊಳಗೆ ಹೋಗಿ ದೇವರದರ್ಶನ ಮಾಡಿಕೊಂಡು ಬಂದರು.

ಬಾಪೂಗೆ ಈ ವಿಷಯ ತಿಳಿದು ತುಂಬಾ ನೋವಾಯಿತು; ಅವರ ದೇಹಸ್ಥಿತಿ ಕೆಡುವಷ್ಟುಮಟ್ಟಿಗೆ ನೋವಾಯಿತು. ಗಾಂಧಿ ಸೇವಾಸಂಘದ ಎಲ್ಲ ಜನರ ಎದುರಿಗೆ ಮಹದೇವಭಾಯಿ, ಕಸ್ತೂರಿಬಾ, ದುರ್ಗಾಬೇನ್, ನಾರಾಯಣ ಎಲ್ಲರನ್ನೂ ಕರೆದು ಬಹಿರಂಗವಾಗಿ ದಂಡಿಸಿದರು. ಕಸ್ತೂರಿ ಬಾನ್ನ ಕುರಿತು "ಆಶ್ರಮದ ತಾಯಾದ ನೀನೇ ಆಶ್ರಮದ ನಿಯಮಗಳನ್ನು ಮುರಿಯಲು ಪ್ರಾರಂಭಿಸಿದರೆ ಇನ್ನುಳಿದವರು ಹೇಗೆ ಅನುಸರಿಸಿಯಾರು ?" ಎಂದರು. ಎಲ್ಲರೂ ತಮ್ಮ ತಪ್ಪನ್ನೊಪ್ಪಿಕೊಂಡರು. ಹೀಗೆ ಗಾಂಧೀಜಿಯು ತನ್ನವರು ಹೊರಗಿನವರು ಎಂಬ ತಾರತಮ್ಯವಿಲ್ಲದೆ ದಂಡನೆಮಾಡುತ್ತಿದ್ದರು. ಕಸ್ತೂರಿಬಾ, ತನ್ನ ತಪ್ಪನ್ನೊಪ್ಪಿಕೊಂಡು, ಸಂತೋಷವಾಗಿ ಶಿಕ್ಷೆಯನ್ನು ಅನುಭವಿಸುತ್ತಿದ್ದರು. ಅದೇ ಅಲ್ಲವೇ ಅವಳ ಹಿರಿಮೆ.

ಕಸ್ತೂರಿಬಾ ರಾಜಕೋಟೆಯ ಸತ್ಯಾಗ್ರಹಕ್ಕೆ ಹೋದದ್ದೇಕೆ ಎಂದು ಹಲವರು ಪ್ರಶ್ನೆ ಕೇಳಿದ್ದಾರೆ. ಅದಕ್ಕೆ ಬಾಪೂ ಈ ರೀತಿ ಉತ್ತರ ಕೊಟ್ಟಿದ್ದಾರೆ.

"ನನ್ನ ಹೆಂಡತಿ ರಾಜಕೋಟೆಯ ಸತ್ಯಾಗ್ರಹದಲ್ಲಿ ಏಕೆ ಭಾಗ ವಹಿಸಿದಳು ಎನ್ನುವುದನ್ನು ನಾನು ಹೇಳಬಾರದೆಂದಿದ್ದೆ.. ಕೆಲವು ಕಠಿನ ಟೀಕೆಗಳು ಬಂದದ್ದರಿಂದ ನಾನು ಉತ್ತರಕೊಡಲೇಬೇಕಾಗಿದೆ. ಕಸ್ತೂರಿಬಾ ಈಗ ತುಂಬ ಹಣ್ಣು ಹಣ್ಣು ಮುದುಕಿ. ಮೇಲಾಗಿ ಈ ವೃದ್ಧಾಪ್ಯದಲ್ಲಿ ಕಷ್ಟವನ್ನು ಸಹಿಸುವ ಶಕ್ತಿಯೇ ಇಲ್ಲ. ಆದ್ದರಿಂದ ಅವಳು ಸತ್ಯಾಗ್ರಹ ಹೂಡುವ ಸಂಭವವೇ ಇರಲಿಲ್ಲ. ಅವಳು ಅವಿದ್ಯಾವಂತಳಾದರೂ, ಮೊದಲಿನಿಂದ ಅವಳ ಇಷ್ಟ ಬಂದಂತೆ ನಡೆಯಲು ಬಿಟ್ಟಿದೇನೆ. ಅವಳು ದಕ್ಷಿಣ ಆಫ್ರಿಕದಲ್ಲಾಗಲೀ ಅಥವಾ ಭಾರತದಲ್ಲಾಗಲೀ ಸತ್ಯಾಗ್ರಹ ಹೂಡಲು ಅಪೇಕ್ಷೆಪಟ್ಟಾಗ ಅವಳ ಆತ್ಮಪ್ರೇರಣೆಯಿಂದಲೇ ನಡೆದುಕೊಂಡಿದಾಳೆ. ಮಣಿಬೇನಳ ದಸ್ತಗಿರಿಯಾದ ಮೇಲೆ ಬಾ ಸುಮ್ಮನೆ ಕೂಡಲು ಇಷ್ಟಪಡಲಿಲ್ಲ. ನಾ ಮೊದಲೇ ಹೇಳಿದೇನೆ, ಅವಳು ದುರ್ಬಲಳು ಎಂದು. ಅವಳು ಮೊನ್ನೆ ದೆಹಲಿಯಲ್ಲೆ ಸ್ನಾನಮಾಡುತ್ತಿರುವಾಗ ಮೂರ್ಛೆ ಬಂದು ಬಿದ್ದು ಮೈ ಕೈ ನೋವುಮಾಡಿಕೊಂಡಳು. ದೇವದಾಸನಿಲ್ಲದಿದ್ದರೆ ಅವಳು ಅಂದೇ ತೀರಿ ಹೋಗಬೇಕಾಗಿತ್ತು. ಆದರೂ ತಾನು ರಾಜಕೋಟೆಯ ಸತ್ಯಾಗ್ರಹದಲ್ಲಿ ಭಾಗವಹಿಸುತ್ತೇನೆಂದು ಹೇಳಿದಾಗ ನಾನು ವಜ್ರದೇಹಿ ಸರ್ದಾರರ ಕಡೆ ಕಳುಹಿಸಿದೆ. ಮೊದಲು ಅವರು ಅಪ್ಪಣೆ ಕೊಡಲಿಲ್ಲ. ಕೊನೆಗೆ ಅವರ ಹೃದಯವೇ ಕರಗಿ ಕಸ್ತೂರಿಬಾಗೆ ಅಪ್ಪಣೆಕೊಟ್ಟರು.

ನನಗೂ ರಾಜಕೋಟೆಯ ರಾಜರಿಗೂ ಆದಂಥ ನಂಬಿಕೆದ್ರೋಹದ ದುಃಖ ಸರ್ದಾರರಿಗೆ ಗೊತ್ತಿತ್ತು. ಬಾ ರಾಜಕೋಟೆಯ ಮಗಳು. ಕಸ್ತೂರಿ ಬಾ ತನ್ನ ತಾಯ್ನಾಡಿನ ಕರೆಯನ್ನು ಮರ್ಯಾದಿಸಿದಳು. ರಾಜಕೋಟೆಯ ಉಳಿದ ಹೆಣ್ಣುಮಕ್ಕಳು ಸ್ವಾತಂತ್ರ್ಯಕ್ಕಾಗಿ ಹೊಡೆದಾಡುತ್ತಿರಲು, ಬಾ ಹೇಗೆ ಸುಮ್ಮನೆ ಕುಳಿತಾಳು? ರಾಜಕೋಟೆಯೂ ಕಸ್ತೂರಿಬಾಗೆ ಪ್ರಾಮುಖ್ಯ ವೆನಿಸಿದ್ದೇನೂ ಆಶ್ಚರ್ಯವಲ್ಲ. ಪೋರ್ ಬಂದರಿನಲ್ಲಿ ಹುಟ್ಟಿದರೂ ಹುಡುಗಿ ಯಾಗಿದ್ದಾಗಿನಿಂದಲೂ ರಾಜಕೋಟೆಯಲ್ಲೇ ಬೆಳೆದಳು. ಆದ್ದರಿಂದ ರಾಜ ಕೋಟೆಯ ಪ್ರಜೆಗಳಾದ ನಾವು ಈ ಅಹಿಂಸಾಯುದ್ಧದಲ್ಲಿ ಮೂಕರಾಗಿರಲು ಸಾಧ್ಯವಿರಲಿಲ್ಲ. "ಸ್ವಾತಂತ್ರ್ಯದ ತಳಹದಿಗೆ ಒಂದು ಬಲವಾದ ಇಟ್ಟಿಗೆಯನ್ನು ,, ದಂತಾಗುವುದು. ರಾಜಕೋಟೆಯಲ್ಲಿ ವಿಜಯನಾದರೆ ಸ್ವಾತಂತ್ರ್ಯದ

ಮಂದಿರ ಕಟ್ಟುವುದಕ್ಕೆ ಕಸ್ತೂರಿಬಾನ ಹೆಮ್ಮೆಯ ಪಾತ್ರ ಅವಳ ಸೇವೆ. ಆದ್ದರಿಂದಲೇ ಅವಳು ವೀರ ಸತ್ಯಾಗ್ರಹಿಯಾಗಿ ರಾಜಕೋಟೆಗೆ ಹೋದುದು. ಸತ್ಯಾಗ್ರಹವನ್ನು ಯಾರು ಬೇಕಾದರೂ ಆಚರಿಸಬಹುದು. ಹುಡುಗರು, ಮುದುಕರು ಎಂಬ ಭೇದವಿಲ್ಲ. ಆದರೆ ಗಟ್ಟಿಮನಸ್ಸು, ವಜ್ರಹೃದಯ ಮಾತ್ರ ಇರಬೇಕು ".

ಒಂದು ಸಲ ಗಾಂಧೀ ಶಿಷ್ಯರಾದ ವಿವಾಹಿತ ದೇಶಸೇವಕರೊಬ್ಬರು ಅವಿವಾಹಿತ ತರುಣಿಯೋರ್ವಳಿಗೆ ಪಾಠ ಹೇಳಿಕೊಡುವಾಗ ಮೋಹ ಪಾಶಕ್ಕೆ ಸಿಲುಕಿ ಮೈ ಒಂದುಗೂಡಿಸಿಕೊಂಡರು. ಪರಿಣಾಮ ಆ ಕನ್ಯೆ ಗರ್ಭಿಣಿಯಾದಳು. ಊರೆಲ್ಲಾ ಗೊಂದಲವಾಗಿ ಬಾಪೂಗೂ ತಿಳಿಯಿತು. ಇಬ್ಬರನ್ನೂ ಬರಮಾಡಿಕೊಂಡು ಚೆನ್ನಾಗಿ ದಂಡಿಸಿದರು. ಮತ್ತೇನು ಕಠಿಣಶಿಕ್ಷೆ ಕೊಡುತ್ತಿದ್ದರೋ ಏನೋ ಅಷ್ಟರಲ್ಲಿ ಕಸ್ತೂರಿಬಾ ಬಂದು 'ಈಗ ಶಿಕ್ಷೆ ಕೊಟ್ಟು ಏನು ಪ್ರಯೋಜನ. ಒಬ್ಬರನ್ನೊಬ್ಬರು ಪ್ರೀತಿಸಿದಾರೆ. ಈಗ ತೀರಾ ಕೈಮೀರಿದ ಮೇಲೆ ಇಬ್ಬರನ್ನೂ ಅಗಲಿಸಿ ಎರಡು ಜೀವವನ್ನು ವ್ಯರ್ಥವಾಗಿ ಗೋಳಾಡಿಸಬೇಡಿ. ನನ್ನ ಹತ್ತಿರ ಬಿಡಿ. ನಾನು ಅವರಿಗೆ ಬುದ್ಧಿ ಹೇಳುತ್ತೇನೆ' ಎಂದು ತಮ್ಮ ಹತ್ತಿರ ಇಟ್ಟುಕೊಂಡು ದುರಂತವಾಗಿ ಮುಗಿಯಬೇಕಾಗಿದ್ದ ಎರಡು ಜೀವಗಳನ್ನು ಅದರಿಂದ ತಪ್ಪಿಸಿದರು. ಎಲ್ಲ ಕಡೆಯೂ ಈ ಹೆಣ್ಣು ಹೃದಯ, ಆಶ್ರಮದಲ್ಲಿರುವ ರತ್ನಗಳನ್ನು ಪೋಣಿಸಿ ರತ್ನಮಾಲೆಯನ್ನು ಮಾಡಿರುವ ಜೀವಸೂತ್ರ.

ಶ್ರೀಮತಿ ವಿಜಯಲಕ್ಷ್ಮಿ ಪಂಡಿತರ ಮದುವೆಯಲ್ಲಿ ಗಾಂಧೀಜಿಗೂ ಆಕೆಯ ತಾಯಿಗೂ ಅಸಾಧ್ಯ ಮನಸ್ತಾಪ. ಮದುಮಗಳು ಹಸೆಯಮೇಲೆ ಉಡಬೇಕಾದ ಸೀರೆ ಖಾದಿಯದಾಗಬೇಕು ಎಂದು ಗಾಂಧೀಜಿ. ಇಲ್ಲ, ಜರತಾರಿ ಪಿತಾಂಬರವಾಗಬೇಕು ಎಂದು ವಧುವಿನ ತಾಯಿ.

ಜಗಳ ಪ್ರಕೋಪಕ್ಕೆ ಹೋಯಿತು. ಮೋತಿಲಾಲನೆಹರು ಅತ್ತಲೂ ಹೇಳದೆ, ಇತ್ತಲೂ ಹೇಳದೆ ಸುಮ್ಮನಿದ್ದರು. ಕಡೆಗೆ ಕಸ್ತೂರಿಬಾರವರೇ ತೊಡಕನ್ನು ಬಗೆಹರಿಸಿದರು. ತಾನೇ ನೂತ ದಾರದಿಂದ ನೇಯಿಸಿದ ಮೆದು ವಾದ ಸೀರೆಯೊಂದನ್ನು ಮದುಮಗಳಿಗೆ ಕಾಣಿಕೆ ಕೊಟ್ಟರು. ಆ ಉಡು

ಗೊರೆಗಿಂತ ಪಿತಾಂಬರವೇ ? ಹಸೆಯಮೇಲೆ ಈ ಖಾದಿ ಸೀರೆಯನ್ನುಟ್ಟು ಮದುಮಗಳು ಕುಳಿತಳು.

ಬಾಪೂನ ವಿಷಯದಲ್ಲಿ ಬಾ ಏನನ್ನುತ್ತಾರೆ ಗೊತ್ತೆ ? " ಬಾಪು ಮಹಾತ್ಮರು. ತಾವು ಮಾಡಿದ ತಪ್ಪನ್ನು ಒಪ್ಪಿಕೊಳ್ಳಬಲ್ಲ ಧೀರರು. ನನಗೆ ಅವರು ಯಾವಾಗಲೂ ಅನ್ಯಾಯಮಾಡಿಲ್ಲ. ನಾನೇ ಯಾವಾಗಲೂ ತಪ್ಪುಮಾಡಿದೇನೆ"

# ನನಗೆ ಬಾ ದರ್ಶನ

ಸೇವಾಗ್ರಾಮ. ಸೇವೆಯನ್ನೇ ತಮ್ಮ ಜೀವನದ ಹೆಗ್ಗುರುತಾಗಿಟ್ಟು ಕೊಂಡು ಮಾನವಕಲ್ಯಾಣಕ್ಕಾಗಿ ದುಡಿಯುತ್ತಿರುವ ಬಾಪೂರವರ ಆವಾಸ ಸ್ಥಾನ. ಅದಕ್ಕೆ ಮೊದಲು ಸೇಗಾಂವ್ ಎಂದು ಹೆಸರಿದ್ದುದು ಈಗ ಸೇವಾ ಗ್ರಾಮವಾಗಿದೆ. ವಾರ್ಧಾದಿಂದ ಆರು ಮೈಲಿ ದೂರದಲ್ಲಿ ಸೇವಾಗ್ರಾಮ. ಬಿಸಿಲುಗಾಲದಲ್ಲಿ ವಿಪರೀತ ಸೆಖೆ, ಬಿಸಿಲು; ಮಳೆಗಾಲದಲ್ಲಿ ವಿಪರೀತ ಮಳೆ.

೧೯೪೧ನೇ ಮಾರ್ಚಿ ೧೯ನೇ ಸೋಮವಾರ ಬೆಳಿಗ್ಗೆ ನಾನು ವಾರ್ಧಾ ದಿಂದ ಸೇವಾಗ್ರಾಮಕ್ಕೆ ನಡೆಯುತ್ತಿದ್ದೆ. ಬೆಳಗಿನ ೯ ಗಂಟೆಗಾಗಲೇ ಬಿಸಿಲಿನ ಝಳ ಹೊಡೆಯುತ್ತಲಿತ್ತು. ನನ್ನ ಸಣ್ಣ ಗಂಟೊಂದನ್ನು ಹೊತ್ತು ಪ್ರಪಂಚದ ಮಹಾತ್ಮನೊಬ್ಬನನ್ನು ಮೊಟ್ಟಮೊದಲನೆಯ ಸಲ ನೋಡಲು ಹೊರಟಿದ್ದೆ. ನನ್ನ ಹುರುಪು ಉತ್ಸಾಹದ ಭರದಲ್ಲಿ ನನ್ನ ಆಯಾಸವೆಲ್ಲವೂ ಮಾಯವಾಗಿತ್ತು.

ನಾನು ಸೇವಾಗ್ರಾಮವನ್ನು ತಲುಪಿದಾಗ ಸುಮಾರು ೧೧ ಗಂಟೆ. ಬಿಸಿಲಿನ ಬೇಗೆಯಲ್ಲಿ ಬೆಂದುಹೋಗಿದ್ದೆ. ತುಂಬ ನೀರಡಿಕೆಯಾಗಿತ್ತು. ನಮ್ಮ ಮೈಸೂರಿನ ಹಿರಳ್ಳಿ ದಾಸಪ್ಪನವರು ಅಲ್ಲಿದ್ದರು. ಅವರ ಮೂಲಕ ವಾಗಿಯೇ ನಾನು ಅಲ್ಲಿರಲು ಅಪೇಕ್ಷೆಪಟ್ಟಿದ್ದು. ಮೊದಲು ಹಿರಳ್ಳಿಯವರನ್ನು ಹೋಗಿ ನೋಡಿದೆ. ಮೊದಲು ಬಂತು ಅವರಿಂದ ಬೈಗಳು. ಆಶ್ರಮಕ್ಕೆ ಹೋಗುವವರು ಮೊದಲೇ ತಿಳಿಸಿ ಹೋಗಬೇಕೆಂಬುದು ನಿಯಮ, ಅದನ್ನು

ನಾನು ಮಾಡಲಿಲ್ಲ. ನಾನಲ್ಲಿಗೆ ಹೋಗಿದ್ದು ಎರಡು ಕಾರಣಗಳಿಗಾಗಿ—ಬೇಸಿಗೆಯ ರಜಾಕಾಲದ ಮೂರು ತಿಂಗಳಲ್ಲಿ ವಾರ್ಧಾ ಶಿಕ್ಷಣದ ಪದ್ಧತಿಯನ್ನು ಕಲಿಯಬೇಕೆಂದು, ಎರಡನೆಯದಾಗಿ ಮಹಾತ್ಮರನ್ನು ದರ್ಶನ ಮಾಡಿ ಸಾಧ್ಯವಾದರೆ ಸೇವಾಗ್ರಾಮದಲ್ಲಿಯೇ ಇರಬೇಕೆಂದು.

ಸರಿ, ನನ್ನ ಭೇಟಿ ಗಾಂಧೀಜಿಯೊಂದಿಗೆ ೩ ಗಂಟೆಗೆಂದು ನಿರ್ಧಾರವಾಯಿತು. ಅಲ್ಲಿಯವರೆಗೆ ನಾನೇನು ಮಾಡಬೇಕು? ಎಲ್ಲಿರಬೇಕು? ಗಾಂಧೀಜೀ ನನಗೆ ಅಪ್ಪಣೆ ಕೊಡುವರೋ ಇಲ್ಲವೋ, ಮುಂತಾದ ಪ್ರಶ್ನೆಗಳು ನನ್ನ ತಲೆಯನ್ನು ಹೊಕ್ಕವು. ಬಾಪೂಜಿ ಗುಡಿಸಲ ಎದುರುಗಡೆಯ ತೋಟದಲ್ಲಿ ೩ ಗಂಟೆಯನ್ನೇ ಎದುರುನೋಡುತ್ತಾ ಒಂದು ಮರದ ಬುಡದಲ್ಲಿ ಕುಳಿತೆ.

ಆಶ್ರಮದಲ್ಲಿ ೧೧॥ ಗಂಟೆಗೆ ಊಟ. ಮೊಟ್ಟಮೊದಲನೆಯ ಸಲ ಮಹಾತ್ಮರನ್ನು ನೋಡಿದೆ. ಮಿರುಮಿರುಗುವ ಮೈ, ನಗುಮುಖ, ಸಣಕಲು ದೇಹ, ಟೊಂಕಕ್ಕೆ ಕಟ್ಟಿಕೊಂಡ ಗಡಿಯಾರ ಇವುಗಳನ್ನು ನೋಡಿ ಮೈಮರೆತು ಹೋದೆ. ಸ್ವಲ್ಪ ಹೊತ್ತಿನ ಮೇಲೆ ಅವರನ್ನು ಹಿಂಬಾಲಿಸಿದರು ಬಾ. ಬಾ ಆಗಲೇ ಮುದುಕಿಯಂತೆ ಕಂಡರು ನನಗೆ. ಗಿಡ್ಡಮಾಟಿನ ದೇಹ. ಬಿಳಿಯ ಖಾದಿಯ ಸೀರೆ ಆಕೆಗೊಂದು ಭೂಷಣವನ್ನು ಕೊಡುತ್ತಿತ್ತು. ಎಲ್ಲರೂ ಊಟಕ್ಕೆ ಕುಳಿತರು. ನನ್ನನ್ನು ಯಾರೂ ಕರೆಯಲೇ ಇಲ್ಲ. ನನಗೆ ಹೊಟ್ಟೆಯಲ್ಲಿ ತಳಮಳವಾಗುವುದಕ್ಕೆ ಪ್ರಾರಂಭವಾಯಿತು. ಅವರು ಊಟ ಮಾಡುತ್ತಿದ್ದುದನ್ನು ನೋಡಿ ಇನ್ನೂ ರೇಗಿತು. ಬಿಸಿಲಿನಲ್ಲಿ ೬ ಮೈಲಿ ನಡೆದು ಬಂದು ಹೊಟ್ಟೆ ತಾಳಹಾಕಲಿರುವಾಗ, ನನ್ನ ಮುಂದೆಯೇ ಊಟ ಮಾಡುತ್ತ ಕುಳಿತಿರುವಾಗ ನನಗೆ ಊಟವಿಲ್ಲ. ಆಶ್ರಮ ಒಂದು ಛತ್ರವಲ್ಲ, ನಿಯಮ ಪಾಲಿಸುವ ಒಂದು ಸಂಸ್ಥೆ. ಹೇಳದೆ ಕೇಳದೆ ಬರುವವರಿಗೆ ಇದೇ ಶಿಕ್ಷೆ. ನನಗೂ ಅದೇ ಶಿಕ್ಷೆ. ಗಾಂಧೀಜಿ ಊಟ ಒಂದು ಗಂಟೆ ನಡೆಯಿತು. ಅದೇನು ಊಟಮಾಡಿದರೋ, ಅಂದು ಏನೋ ಹಬ್ಬವಿರಬೇಕೆಂದುಕೊಂಡೆ; ಆಮೇಲೆ ತಿಳಿಯಿತು, ಅವರು ಊಟಮಾಡುವುದು ದಿನವೂ ಒಂದು ಗಂಟೆಯಾಗುತ್ತದೆಂದು. ಅಂದರೆ ಅಷ್ಟು ನಿಧಾನ.

ಮಹಾತ್ಮರನ್ನು ನೋಡಿದ ಸಂತೋಷದಲ್ಲಿ, ಆಯಾಸದ ಭರದಲ್ಲಿ ಹಾಗೆಯೇ ಮರದಡಿಯಲ್ಲಿ ಜೋಂಪು ನಿದ್ದೆಯಿಂದ ಒರಗಿಕೊಂಡಿದ್ದೆ. ಸ್ವಲ್ಪ ಹೊತ್ತಿನಲ್ಲಿ ಯಾರೋ ಬಂದು ನನ್ನನ್ನು ತಟ್ಟಿದರು. ಎದ್ದು ನೋಡುವಾಗ ಕಸ್ತೂರಬಾ ನನ್ನ ಮುಂದೆ ನಿಂತಿದ್ದರು. ನಾನು ಪಾವನನಾದೆನೆಂದು ತಿಳಿದುಕೊಂಡೆ. ನನ್ನ ಹಸಿವೆಲ್ಲ ಇಂಗಿಹೋಯಿತು. ಕಸ್ತೂರಬಾ ಆಶ್ರಮಕ್ಕೆ ಬರುವ ಹೊರಗಿನವರ ಯೋಗಕ್ಷೇಮವನ್ನು ವಿಚಾರಿಸುತ್ತಿದ್ದುದರಿಂದ ನನ್ನ ಹತ್ತಿರ ಬಂದಿದ್ದರು. ನನ್ನ ಕಥೆಯನ್ನೆಲ್ಲಾ ಹಿರಳ್ಳಿಯವರು ಈ ಮೊದಲೇ ತಿಳಿಸಿದ್ದರಿಂದ ಬಾಗೆ ನನ್ನ ವಿಷಯ ತಿಳಿದಿತ್ತು.

ಕಸ್ತೂರಿಬಾ ಹಿಂದಿಯಲ್ಲಿಯೋ ಗುಜರಾತಿಯಲ್ಲಿಯೋ ಕೇಳಿದರು: "ನಿನ್ನನ್ನು ನೋಡಿದರೆ ನನಗೆ ಕನಿಕರವಾಗುತ್ತದೆ. ನೀನೇಕೆ ಹೇಳದೆ ಕೇಳದೆ ಬಂದೆ? ಬಾಪೂನ ನಿಯಮಗಳು ನಿನಗೆ ಗೊತ್ತಿಲ್ಲವೆ? ನೀನು ಊಟಮಾಡಿಲ್ಲ ಎಂದು ನನಗೆ ಗೊತು".

ನಾನಂದೆ "ಹೌದು ನಾನು ತಪ್ಪುಮಾಡಿದೆ".

ಬಾ ಹೇಳಿದರು, "ಬಾಪೂನ ಕಟ್ಟಾಜ್ಞೆ. ಆಶ್ರಮದ ನಿಯಮ, ತಿಳಿಸದೆ ಬರುವವರಿಗೆ ಬಾಪೂನ ಅಪ್ಪಣೆಯಿಲ್ಲದೆ ಹೊರ್ತು ನಾನು ಬಡಿಸುವ ಹಾಗಿಲ್ಲ. ೩ ಗಂಟೆಗೆ ಬಾಪು ನಿನ್ನನ್ನು ಕರೆಯಿಸುತ್ತಾರೆ. ತಪ್ಪು ಒಪ್ಪಿಕೋ. ಅದರಲ್ಲೇನೂ ನಾಚಿಕೆಯಿಲ್ಲ. ನಾನೆಷ್ಟು ಸಲ ತಪ್ಪುಮಾಡಿ ಒಪ್ಪಿಕೊಂಡಿಲ್ಲ"

ನಾನು "ಹೂಂ" ಎಂದು ತಲೆಯಲ್ಲಾಡಿಸಿದೆ. ಬಾ ನಗುತ್ತಾ "ಇನ್ನು ಮೇಲೆ ಹೀಗೆ ಮಾಡಬೇಡ" ಎಂದು ಹೇಳಿ ಹೊರಟುಹೋದರು. ಆ ನಗುವಿನಲ್ಲಿ ಒಂದು ಕನಿಕರವಿತ್ತು, ಸಹಾನುಭೂತಿಯಿತ್ತು; ಅಂತಃಕರಣದ ಆವಿರ್ಭಾವವಿತ್ತು.

ಮೂರು ಗಂಟೆಗೆ ಸರಿಯಾಗಿ ಬಾಪೂರವರನ್ನು ನೋಡಿದೆ. ಮೊದಲು ನಮಸ್ಕಾರ ಹಾಕಿದೆ. ವೈಯಕ್ತಿಕ ಸತ್ಯಾಗ್ರಹ ನಡೆಯುತ್ತಿದ್ದ ಕಾಲ. ಆಗತಾನೇ ಶ್ರೀ ಪ್ಯಾರಿಲಾಲ್‌ರು ದಸ್ತಗಿರಿಯಾಗಿದ್ದರು. ಬಾಬುರಾಜೇಂದ್ರ ಪ್ರಸಾದರು ದಸ್ತಗಿರಿಯ ಸುದ್ದಿಯನ್ನೆಲ್ಲ ಹೇಳುತ್ತಿದ್ದರು. ಪಕ್ಕದಲ್ಲಿ ಮಣಿಬೇನ್ ಗಾಳಿಬೀಸುತ್ತಿದ್ದರು. ಕಸ್ತೂರಬಾ ಈಕಡೆ ಪಕ್ಕದಲ್ಲಿದ್ದರು. ಮುಂದುಗಡೆ ತಪ್ಪಿತಸ್ಥನಾದ ಅಪರಾಧಿ ನಾನು. ನನ್ನನ್ನು ಚೆನ್ನಾಗಿ

ದಂಡಿಸಿದರು. ನಾನಿಲ್ಲಿಗೆ ತಿಳಿಸದೆ ಬರಬಾರದಿತ್ತೆಂದರು, ಸುಮ್ಮನೆ ಹಣ ಖರ್ಚುಮಾಡಿದೆನೆಂದರು. ಎಲ್ಲದಕ್ಕೂ ತಲೆಬಾಗಿಸಿದೆ, ನನ್ನ ಕಣ್ಣುಗಳಲ್ಲಿ ನೀರು ಬಂತು. ತಪ್ಪನ್ನೊಪ್ಪಿಕೊಂಡು ಇನ್ನುಮುಂದೆ ಹಾಗೆ ಮಾಡುವುದಿಲ್ಲ ವೆಂದೆ. ಗಾಂಧೀಜಿ ಸುಪ್ರೀತರಾದರು. ನನಗೆ ನಿಜವಾದ 'ಬಾಪೂ' ಆದರು. ಬಾನ್ನ ಕರೆದು " ಈ ನಿನ್ನ ಹೊಸ ತಿಳಿಗೇಡಿ ಮಗನಿಗೆ ಊಟ ಹಾಕು " ಎಂದರು.

ನನ್ನ ಸಂತೋಷಕ್ಕೆ ಪಾರವೇ ಇಲ್ಲದಂತಾಯಿತು. ಅಂದಿನಿಂದ ಗಾಂಧೀಜಿ ನನಗೆ ಬಾಪು; ಕಸ್ತೂರಬಾ ನನಗೆ ಬಾ.

ಕಸ್ತೂರಬಾ ನನ್ನನ್ನು ಎಳೆದುಕೊಂಡು ಹೋಗಿ ಊಟ ಬಡಿಸಿದರು. ಊಟಮಾಡುತ್ತಿರುವಾಗ ಪ್ರತಿಯೊಂದು ತುತ್ತಿನಲ್ಲಿಯೂ ತಾಯ್ತನದ ಪ್ರೇಮವನ್ನು ಕಂಡೆ. " ನಮ್ಮ ಊಟ ನಿನಗೆ ಸೇರಿತೆ ?" ಎಂದರು. "ಹೂ" ಎಂದು ತಲೆಯಲ್ಲಾಡಿಸಿದೆ.

ಕಸ್ತೂರಬಾನ್ನ ನಾನು ಮೊದಲನೆಯ ಸಲ ನೋಡಿದೆ. ಅದೇ ಕೊನೆಯ ಸಲವೂ ಆಯಿತು. ಕ್ರೂರ ವಿಧಿ ಅವರನ್ನು ತನ್ನಡಿಗೆ ತೆಗೆದು ಕೊಂಡುಹೋಯಿತು.

## ವಿಚಾರತರಂಗ

ಕಸ್ತೂರಿಬಾನ ಮೊಮ್ಮಗ ಕಾಂತಿಲಾಲ್ ಗಾಂಧಿ ಮೈಸೂರಿನಲ್ಲಿ ವೈದ್ಯ ಪರೀಕ್ಷೆಗೆ ಓದುತ್ತಿದ್ದರು. ಒಂದು ದಿನ ನಾನು ಅವರ ಹತ್ತಿರ ಮಾತನಾಡುತ್ತಾ ಕಸ್ತೂರಿಬಾ ವಿಷಯ ಹೇಳಬೇಕೆಂದು ಕೇಳಿದೆ. ಕಾಂತಿ ಲಾಲರನ್ನು ಎಳೆಯ ಮಗುವಿನಿಂದ ಹಿಡಿದು ಬುದ್ಧಿ ಬರುವವರೆಗೂ ಬೆಳಕಿಗೆ ತಂದು ಆರೈಕೆ ಮಾಡಿದವರು ಕಸ್ತೂರಿಬಾ. ಆದ್ದರಿಂದ ನನ್ನ ಕುತೂಹಲ ಇನ್ನೂ ಹೆಚ್ಚಿತು. ಕಾಂತಿಲಾಲರು ಈರೀತಿ ಹೇಳಿದರು :

ಕಸ್ತೂರಿಬಾನ ವಿಷಯದಲ್ಲಿ ಹೆಚ್ಚು ನಾನೇನು ಹೇಳಬೇಕಾದ್ದಿಲ್ಲ. ಗಾಂಧೀಜಿಯೇ ಎಲ್ಲಾ ಹೇಳಿಬಿಟ್ಟದ್ದಾರೆ. ನಾನು ಎಳೆಯವನಾಗಿದ್ದಾಗ

ನಿಂದಲೂ ಬಲು ಮುದ್ದಿನಿಂದ ನನ್ನನ್ನು ಸಾಕಿದರು. ತನ್ನ ಮಕ್ಕಳು ಮೊಮ್ಮಕ್ಕಳೆಂದರೆ ಅವಳಿಗೆ ಅತಿಶಯ ಪ್ರೀತಿ. ಎಲ್ಲರನ್ನೂ ಒಂದೇ ರೀತಿ ಯಲ್ಲಿ ನೋಡುತ್ತಿದ್ದರು. ತನ್ನ ಮಕ್ಕಳು ಮೊಮ್ಮಕ್ಕಳಲ್ಲಿ ಸ್ವಲ್ಪ ಜಾಸ್ತಿ ಪ್ರೀತಿಯಿತ್ತು.

ಬಾಗೂ ರಾಜಕೀಯಕ್ಕೂ ಬಲು ದೂರ. ಆದರೆ ಗಾಂಧೀಜಿಯಲ್ಲಿ ಅಪ್ರತಿಮ ಭಕ್ತಿಯನ್ನಿಟ್ಟುಕೊಂಡದ್ದರಿಂದ ಬಾಪೂ ಹೇಳಿದ್ದೆಲ್ಲವನ್ನೂ ಚಾಚೂ ತಪ್ಪದೆ ಮಾಡುತ್ತಿದ್ದರು. ಹೀಗೆಂದ ಮಾತ್ರಕ್ಕೆ ಬಾಪೂವಿನ ಗುಲಾಮಳಾಗಿರಲಿಲ್ಲ. ಅವಳ ಯೋಚನೆ ಆರೀತಿ ಹೋಗುತ್ತಲೇ ಇರಲಿಲ್ಲ. ಬಾಪೂ ಆಚರಿಸುವುದು, ಮಾಡುವುದು ಎಲ್ಲಾ ಜಗತ್ತಿನ ಕಲ್ಯಾಣಕ್ಕಾಗಿ ಎಂದು ತಿಳಿದಿದ್ದುದರಿಂದ ಗಾಂಧೀಜಿಯವರನ್ನು ಮನಃಪೂರ್ತಿಯಾಗಿ ಹಿಂಬಾಲಿಸುತಿದ್ದರು.

ಬಾ ಚಿಕ್ಕಂದಿನಲ್ಲಿ ಶಾಲೆಗೆ ಹೋಗಲಿಲ್ಲ. ಅದಕ್ಕಾಗಿ ಅವರು ಬಹಳ ಪಶ್ಚಾತ್ತಾಪ ಪಟ್ಟಿದ್ದಾರೆ. ಬಾ ಸಹ ವಿದ್ಯಾಭ್ಯಾಸದಲ್ಲಿ ದೋಷವನ್ನೆಣಿ ಸಲಿಲ್ಲ. ಆದರೆ ಈಗಿನ ರೀತಿಯ ವಿಶ್ವವಿದ್ಯಾನಿಲಯದ ವಿದ್ಯಾಭ್ಯಾಸವನ್ನು ಒಪ್ಪಲಿಲ್ಲ. ಜೀವನದ ಸಮಸ್ಯೆಯನ್ನು ಬಗೆಹರಿಸಿ ಜನ ಜೀವನದ ನಿತ್ಯ ಜೀವನದಲ್ಲಿ ಸಹಾಯವಾಗುವಂತಹ ವಿದ್ಯಾಭ್ಯಾಸ ಬೇಕು ಎಂದು ಅವರ ಮತ.

ಬಾ ಸ್ವಾತಂತ್ರ್ಯಪ್ರೇಮಿ. ಆದ್ದರಿಂದಲೇ ಅವರು ರಾಜಕೋಟೆಯ ಸತ್ಯಾಗ್ರಹಕ್ಕೆ ಹೋಗಿದ್ದು.

ಗಾಂಧೀಜಿಗೂ, ಕಸ್ತೂರಿಬಾಗೂ ಕೆಲವು ವಿಷಯಗಳಲ್ಲಿ ಭಿನ್ನಾಭಿ ಪ್ರಾಯವಿತ್ತು. ಗಾಂಧೀಜಿ ಯಾರನ್ನಾದರೂ ಒಮ್ಮೆಲೆ ನಂಬಿಬಿಡು ತ್ತಿದ್ದರು. ಆದರೆ ಕಸ್ತೂರಿಬಾ ಹಾಗಲ್ಲ. ವ್ಯಕ್ತಿಯ ಎಲ್ಲಾ ವಿಷಯ ಗಳನ್ನು ತಿಳಿದುಕೊಂಡಮೇಲೆಯೇ ಅವರಲ್ಲಿ ನಂಬಿಕೆ. ಗಾಂಧೀಜಿಗೆ ಇದ್ದಷ್ಟು ತಾಳ್ಮೆ ಬಾಗೆ ಇರಲಿಲ್ಲ. ಗಾಂಧೀಜಿ ತೊಂದರೆ ತೆಗೆದುಕೊಂಡ ಹಾಗೆ ಬಾ ತೆಗೆದುಕೊಳ್ಳಲಾರರು. ಬಾಗೆ ಸ್ವಾಭಾವಿಕವಾಗಿ ಧರ್ಮಾ ಧರ್ಮದ ವಿವೇಚನೆ ಹೊಳೆಯುತ್ತಿದ್ದರೂ ಗಾಂಧೀಜಿಯಹಾಗೆ ಯಾವ ತೀರ್ಮಾನವನ್ನೂ ಕೊಡುತ್ತಿರಲಿಲ್ಲ.

ಬಾಗೆ ಪ್ರಪಂಚದಲ್ಲೆಲ್ಲಾ ಬಹಳ ಇಷ್ಟವಾದ ವಸ್ತು ಬಾಪೂನೇ.

ಅಂತರ್ಜಾತೀಯ ವಿವಾಹಕ್ಕೆ ಬಾ ವಿರೋಧಿಯಾಗಿರಲಿಲ್ಲ. ಅವಳ ಸೊಸೆ, ದೇವದಾಸರ ಹೆಂಡತಿ ತಮಿಳು ದೇಶದವರು. ನನ್ನ ಹೆಂಡತಿ ಮಲೆಯಾಳಿ ಸ್ತ್ರೀ.

ಬಾಗೆ ಬಹಳ ದುಃಖವಾದದ್ದು ನನ್ನ ತಂದೆ ಮತಾಂತರವಾದಾಗ. ತಾಯಿ ಕರುಳನ್ನೇ ಬಿಚ್ಚಿ ತೋರಿಸಿದರು ದೇಶಕ್ಕೆಲ್ಲಾ. ಬಾನ ತಾಯೆದೆ ನೊಂದು ನೀರಾಯ್ತು. ಬಾಪೂಗೆ ದೇವರು ಅದ್ಭುತ ಮನಶ್ಶಕ್ತಿ ಕೊಟ್ಟಿದ್ದಾನೆ. ಆದರೆ ಬಾಗೆ ಹಾಗಲ್ಲ. ಅವರಿಂದ ಸಹಿಸಲು ಸಾಧ್ಯವಾಗಲಿಲ್ಲ. ಮಗ ಎದುರಿಗೆ ಸಿಕ್ಕರೆ ಎಲ್ಲಿ ಅವಮಾನಮಾಡಿಬಿಡುತ್ತಾನೋ ತಾಯಿಗೆ ಎಂಬ ಹೆದರಿಕೆ ಕೂಡ ಇತ್ತು.

ಬಾ ಮನಸ್ಸು ಬಾಪೂಗಿಂತ ದುರ್ಬಲ. ಆದ್ದರಿಂದ ಬಾಪೂನ ಉಪವಾಸ ಸಮಯಗಳಲ್ಲಿ ಬಹಳ ದುಃಖಿತೆಯಾಗಿರುತ್ತಿದ್ದರು. ಮನಸ್ಸು ಕದಡಿಹೋಗುತ್ತಿತ್ತು. ಬಾಪೂನ ಉಪವಾಸ ದೈವಪ್ರೇರಣೆ ಎಂದು ಸಮಾಧಾನ ತಂದುಕೊಳ್ಳುತ್ತಿದ್ದರು.

ಬಾನ ವಿಷಯ;ಬಹಳ ಸಾಮಾನ್ಯ. ಎಲ್ಲರ ತಾಯಿ ಹೇಗೆ ನಡೆದು ಕೊಳ್ಳುತ್ತಾರೆ ಹಾಗೆ ನೋಡಿಕೊಂಡರು ನಮ್ಮನ್ನು. ತಾಯಂದಿರಿಗೆ ಇರುವ ಗುಣಗಳೆಲ್ಲವೂ ಇತ್ತು. ಬಾ ನಮ್ಮನ್ನು ಕಂಡರೆ ತುಂಬಾ ಅಕ್ಕರೆಯಿಂದ ಇದ್ದರು. ಇದಕ್ಕಿಂತ ಹೆಚ್ಚಿನದು ಅವರಲ್ಲಿ ಏನೂ ಇಲ್ಲ.

ನಾನು ಕೊನೆಯಸಲ ಬಾನ್ನ ನೋಡಿದ್ದು ಮೊನ್ನೆ ಗಾಂಧೀಜಿಯ ಮಹೋಪವಾಸವಾದಮೇಲೆ. ಮುಖದ ಮೇಲೆ ಹೊಳೆಯುವ ತೇಜಸ್ಸು ಇದ್ದರೂ ದೇಹ ಜರ್ಝರಿತವಾಗಿತ್ತು. ಬಹಳ ಕ್ಷೀಣಿಸಿಹೋಗಿದ್ದರು. ಆದರೂ ಅದು ನನ್ನ ಕೊನೆಯ ಭೇಟಿಯಾಗುವುದೆಂದು ನಾ ತಿಳಿದಿರಲಿಲ್ಲ.

ವಿಧಿ ತನ್ನ ಕ್ರೂರವಾದ ಬಾರುಗೋಲನ್ನು ಬಾನ ಮೇಲೆ ಬೀಸಿಯೇ ಬಿಟ್ಟಿತು. ಈಗ ಬಾ ನಮಗಿಲ್ಲ.

# ಬಾನ ಕೊನೆ

೧೯೪೪ನೇ ಇಸವಿ ಫೆಬ್ರವರಿ ೨೨ನೇ ಮಂಗಳವಾರ ಭಾರತದಲ್ಲೆಲ್ಲಾ ಅಮಂಗಳ ದಿನ. ಬಾಗೆ ಮಾತ್ರ ಮಂಗಳ ದಿನ. ಶಿವರಾತ್ರಿಯ ಸಂಜೆ ೭॥ ಗಂಟೆಗೆ ಶಿವೈಕ್ಯರಾದರು. ಗಾಂಧೀಜಿಯ ಸಂಗಡ ೬೨ ವರ್ಷಗಳ ವರೆಗೆ ತಪೋಜೀವನ ನಡೆಯಿಸಿ ಸಿದ್ಧಿಯನ್ನು ಪಡೆದು ಗಾಂಧೀಜಿಯವರ ತೊಡೆಯ ಮೇಲೆ ಪ್ರಾಣ ಬಿಟ್ಟರು ಕಸ್ತೂರಬಾ. ಪಂಡಿತ ಮದನ ಮೋಹನ ಮಾಲವೀಯರಂದರು, "ಬಾ, ಇಹವನ್ನುಳಿದಳೆಂದು ಕೇಳಿ ನಾನು ತುಂಬಾ ದುಃಖಿಯಾಗಿದ್ದೇನೆ. ಆಕೆ ಸೌಭಾಗ್ಯವತಿಯಾಗಿ ಹೋದರು ಎಂಬುದಿಷ್ಟೆ ಹಾರ್ದಿಕವಾದ ತೃಪ್ತಿ. ದೇಶವೆಲ್ಲ ದುಃಖದಲ್ಲಿ ಭಾಗಿಯಾಗಿದೆ" ಎಂದು.

ಸೆರೆಮನೆಯನ್ನು ಸೇರುವಾಗಲೇ ಕಸ್ತೂರಬಾ ದೇಹಸ್ಥಿತಿ ಚೆನ್ನಾಗಿ ಇರಲಿಲ್ಲ. ಸೆರೆಮನೆಗೆ ಹೋದಮೇಲೂ ಹೃದ್ರೋಗದಿಂದ ಅನೇಕ ಸಲ ನರಳಿದರು. ದೇಶವೆಲ್ಲಾ ಬಾ ಬಿಡುಗಡೆಗೆ ಪ್ರಾರ್ಥಿಸಿತು, ಹಾತೊರೆಯಿತು. ಹಂಬಲದಿಂದ ಅವಳ ಬಿಡುಗಡೆಗಾಗಿ ಎದುರುನೋಡುತ್ತಿದ್ದರು. ಸರ್ಕಾರದ ಪಾಷಾಣ ಹೃದಯ ಕರಗಲಿಲ್ಲ. 'ಸೆರೆಯಲ್ಲಿರುವುದೇ ಬಾಗೆ ಒಳಿತು' ಎಂದು ಅಣಕಿಸಿದರು. ಅದೇ ಸರ್ಕಾರ ಇಂಗ್ಲೆಂಡಿನ ಫ್ಯಾಸಿಸ್ಟ ನಾಯಕ ಆಸ್‌ವಾಲ್ಡ್ ಮಾಸ್ಲೆಯನ್ನು ಖಾಯಿಲೆಯ ನಿಮಿತ್ತ ಬಿಡುಗಡೆಮಾಡಿತ್ತು. ಕಸ್ತೂರಬಾನ್ನ ಮಾತ್ರ ಬಿಡಲಿಲ್ಲ. ಬಾ ಭಾರತಕ್ಕೆಲ್ಲ ತಾಯಿ. ರಾಷ್ಟ್ರದ ಉಸಿರು. ಆಕೆಯ ಕೂದಲು ಕೊಂಕಿದರೂ ಕೋಟಿ ಸಿಡಿಲು ಸಿಡಿವಾವೆಂದು ಸರ್ಕಾರ ಹೆದರಿ ಬಿಡಲಿಲ್ಲವೋ ಏನೋ. ಬಾನ್ನ ಬಂಧನದಿಂದ ಬಿಟ್ಟರೆ ಬದುಕುತ್ತಿದ್ದರೋ ಏನೋ! ಬಿಡುಗಡೆಯ ಬಯಲಗಾಳಿಯ ಮಾನಸಿಕ ಪರಿಣಾಮವೇ ಸಾಕು. ಗಾಂಧೀಜಿಗೆ ಹೆಚ್ಚು ಖಾಯಿಲೆಯಾಗಿ ಇನ್ನೇನು ಈ ಘಳಿಗೆಯೋ ಮರುಘಳಿಗೆಯೋ ಎನ್ನುವಾಗ ಸರ್ಕಾರ ಹೆದರಿ ಅವರನ್ನು ಬಿಡಲಿಲ್ಲವೇ? ಪರಿಣಾಮವೇನು? ಗಾಂಧೀಜಿ ವಜ್ರಕಾಯರಾಗಿ ಪುನಃ ರಾಜ್ಯಸೂತ್ರದ ಎಳೆಯನ್ನು ಹಿಡಿದುಕೊಂಡು ದೇಶಕ್ಕೆ ಮಾರ್ಗದರ್ಶಿಯಾಗಿ ಹೊರಟರು. ಕಸ್ತೂರಬಾನ್ನ ಬಿಟ್ಟಿದ್ದರೆ ಅವರು ಬದುಕಿಯಾರು ಎಂಬ

ನಂಬಿಕೆ ಇದ್ದುದರಲ್ಲಿ ಆಶ್ಚರ್ಯವೇನಿಲ್ಲ. ಸರ್ಕಾರದ ಕಠಿಣ ನೀತಿಗೆ ಬಾ ತುತ್ತಾಗಿ ಸ್ವರ್ಗಾರೋಹಣ ಮಾಡಿದರು.

ಈ ಮರಣದ ಮೆರವಣಿಗೆ ಪ್ರಾರಂಭವಾದದ್ದು ಜಮನ್‌ಲಾಲ್ ಬಜಾಜ್‌ರಿಂದ. ಸ್ವರ್ಗಾರೋಹಣತತ್ಪರನಾದ ಧರ್ಮರಾಜನಂತೆ ಒಬ್ಬೊಬ್ಬರನ್ನಾಗಿ ತನ್ನ ಅಂತರಂಗದ ಜೀವಿಗಳನ್ನು ಕಳೆದುಕೊಂಡರು ಗಾಂಧೀಜಿ. ಭಾರತದಲ್ಲಿ ಮಾಡಬೇಕಾದ ಕೆಲಸ ಇನ್ನೂ ನೂರ್ಮಡಿಯಾಗಿತ್ತು. ಇಂಥ ಕಾಲಕ್ಕೆ ಗೋ ಸೇವಾಸಂಘದ ಮೂಲಪುರುಷರಾದ, ಕಾಂಗ್ರೆಸ್ಸಿನ ಕೋಶಾಧ್ಯಕ್ಷರಾದ ಜಮುನಲಾಲರು ಸಾವಿನ ಶರಪಂಜರದಲ್ಲಿ ದೇಹವಿಟ್ಟರು. ಅರ್ಜುನನಿಗೆ ಶ್ರೀಕೃಷ್ಣ ಸಾರಥಿಯಾದಂತೆ ಗಾಂಧೀಜಿಗೆ ಕಾರ್ಯದರ್ಶಿಯಾಗಿ ಭಾರತದ ಸ್ವಾತಂತ್ರ್ಯದ ಹಂಬಲದಲ್ಲಿಯೇ ಮರೆಯಾದರು ಮಹದೇವ ಭಾಯಿ. ಭಾರತವನ್ನೆಲ್ಲಾ ಸುತ್ತಾಡಿ ಪಾರ್ಲಿಮೆಂಟರಿ ಪದ್ಧತಿಯ ಹುಚ್ಚಿನಲ್ಲಿ ತಮ್ಮ ದೇಹವೆಲ್ಲ ಸಣ್ಣಾದರೂ ಪ್ರಜಾಪ್ರಭುತ್ವದಲ್ಲಿ ಹುಚ್ಚು ಹಿಡಿಸಿ ಸ್ವಾತಂತ್ರ್ಯದ ಜ್ಯೋತಿಯಲ್ಲಿಯೇ ಲೀನರಾದರು ಸತ್ಯಕಾಮಿ ಸತ್ಯಮೂರ್ತಿಯವರು. ಅಜಾದರ ಕೈಹಿಡಿದು ಸರಿಯಾದ ಅರ್ಧಾಂಗಿಯಾದ ಬೇಗಂ ಅಜಾದರು ಇನ್ನೂ ಪ್ರತಿಭೆಗೆ ಬರುವಾಗಲೇ ಮಾಯವಾದರು. ಸಂಯುಕ್ತ ಪ್ರಾಂತದ ನಾಯಕರಾಗಿ ದೇಶಕ್ಕೆ ಇನ್ನೂ ತಮ್ಮಿಂದ ಸೇವೆ ಆಗಬೇಕಾಗಿತ್ತೆಂದು ನೆನೆಯುತ್ತ ಗತಿಸಿದರು ರಣಜಿತ ಪಂಡಿತರು. ಕೊನೆಯಲ್ಲಿ ಕಸ್ತೂರಬಾ, ಗಾಂಧೀಜಿಯ ಸಂಗಾತಿಯಾಗಿ, ದೇಶಕ್ಕೆ ತಾಯಾಗಿ ಸ್ವಾತಂತ್ರ್ಯದ ವಿಜಯಪತಾಕೆಯನ್ನು ಹಾರಿಸುವುದಕ್ಕೆ ಮುನ್ನವೇ ಕಣ್ಮರೆಯಾದರು. ಇಂಥ ಮೆರವಣಿಗೆಯನ್ನು ಮೆರೆಸಲು ದೇಶ ಆಗ ಸಿದ್ಧವಿರಲಿಲ್ಲ.

ಕಸ್ತೂರಬಾಗೆ ಹೃದ್ರೋಗ ತಲೆದೋರಿದೆ ಎಂದು ಸರ್ಕಾರ ಪ್ರಕಟಿಸಿದಾಗ ಆಕೆ ಅಷ್ಟು ಜಾಗ್ರತೆ ನಮ್ಮನ್ನಗಲುವರೆಂದು ಯಾರೂ ತಿಳಿದಿರಲಿಲ್ಲ. ಆದರೆ ವಿಧಿ ತನ್ನ ಬಲೆಯನ್ನು ಫೆಬ್ರವರಿ ಮಂಗಳವಾರವೇ ಬೀಸಿಬಿಟ್ಟಿತು. ಸರ್ಕಾರ ತನ್ನ ಕರ್ತವ್ಯ ಸರಿಯಾಗಿ ನಿರ್ವಹಿಸಿದ್ದರೆ ಬಾ ಬದುಕುತ್ತಿದ್ದರೋ ಏನೋ, ಔಷಧೋಪಚಾರ ಸಹ ಸರಿಯಾಗಿ ನಡೆಯಲಿಲ್ಲ. ಪೆನಿಸಿಲಿನ್ ಸಂಜೀವಿನಿ ಕೊನೆ ಗಳಿಗೆಯಲ್ಲಿ ಬಂತು. ಕೊನೆಗೂ ಬಾ ಜೀವಪಕ್ಷಿಯು ಹಾರಿಹೋಯಿತು. ಭಾರತದ ನಂದಾದೀಪ ನಂದಿಹೋಯಿತು. ಜೀವ

ತನ್ನ ಕಾಲು ಚಾಚಿ ಬಾನ ಹತ್ತಿರ ಇಣಿಕಿನೋಡುತ್ತಿರುವಾಗ ಗಾಂಧೀಜಿ ಎಂದರು, " ಬಾ, ನಿನ್ನ ಆತ್ಮ ಹೊರಡಲೆತ್ನಿಸುತ್ತಿದೆ. ಶಾಂತಳಾಗಿ ನೀನು ಹೋಗಿ ಬ್ರಹ್ಮನನ್ನು ಸೇರು " ಎಂದು.

ಮಂಗಳವಾರ ಸಂಜೆ ಆರೂವರೆ ಗಂಟೆ. ಗಾಂಧೀಜಿ, ಬಾನ ಮಕ್ಕಳು ಪ್ರೀತಿಯ ದೇವದಾಸ, ರಾಮದಾಸ, ಮೊಮ್ಮಕ್ಕಳು ಎಲ್ಲರೂ ಆಕೆಯ ಬಳಿ ಕೂಡಿದ್ದರು. ಆಶ್ರಮದ ಪ್ರೀತಿಯ ಹಾಡಾದ,

**" ರಘುಪತಿ ರಾಘವ ರಾಜಾರಾಂ ಪತಿತ ಪಾವನ ಸೀತಾರಾಂ "**

ಹಾಡಿದ ಮೇಲೆ ಏಳೂವರೆ ಗಂಟೆಗೆ ಬಾನ ಪ್ರಾಣಪಕ್ಷಿ ಹಾರಿಹೋಯಿತು. ಭಜನೆಯ ನಾದಲೀಲೆಯ ವೈಭವದಲ್ಲಿ ಬಾ ಭಗವಂತನನ್ನು ಸೇರಿದರು.

ಬಾ ನಮ್ಮನ್ನಗಲಿದರು. ಗಾಂಧೀಜಿಯ ರಸಕೋಮಲವಾದ ಜೀವಕ್ಕೆ ಈ ದುಃಖ ಎಷ್ಟೋ ಏನೋ! ಗಾಂಧೀಜಿ ಗೀತೆಯ 'ದೇಹ ಅಶಾಶ್ವತ' ಎಂಬ ತತ್ವವನ್ನು ಮನಗಂಡಿರುವರಾದರೂ, ಈ ನೋವು ಹೆಚ್ಚಿನ ಪರಿಣಾಮ ಮಾಡದೆ ಇಲ್ಲ. ಗಾಂಧೀಜಿಯ ಮನಸ್ಸಿಗೆ ತೆರೆತೆರೆಯಾಗಿ ಬಂದು ತಾಕುತ್ತಿರುವ ಈ ನೋವು, ಈ ಹಾಲಾಹಲ ಮುಂದೆ ಬರಲಿರುವ ಅಮೃತಕಲಶದ ಸೂಚನೆಯಾಯಿತು.

ಬಾನ ಭೌತಿಕ ದೇಹ ಭಸ್ಮೀಭೂತವಾಗಿದ್ದರೂ ಅವರು ಯಾವ ಧ್ಯೇಯಕ್ಕಾಗಿ ದುಡಿದು ಪ್ರಾಣ ನೀಗಿದರೋ ಅದು ಚಿರಸ್ಥಾಯಿಯಾಗಿ ನಿಲ್ಲುವುದು. ಆ ಕೆಲಸಕ್ಕೆ, ಆ ನೆನಪಿಗೆ ಸ್ಮಾರಕವೊಂದು ಆವಶ್ಯಕವೆಂದು ತಿಳಿದು ಭಾರತದ ಹಿರಿಯ ಅಣ್ಣಂದಿರು ಬಾ ಸ್ಮಾರಕ ನಿಧಿಯೊಂದನ್ನು ಗಾಂಧೀಜಿಯ ಹುಟ್ಟುಹಬ್ಬದ ದಿನ ಕೊಡಲು ನಿಶ್ಚಯಿಸಿದರು. ಗಾಂಧೀಜಿಗೆ ೭೫ ವರ್ಷ ತುಂಬುವುದರಿಂದ ೭೫ ಲಕ್ಷ ರೂಪಾಯಿ ನಿಧಿ ಅರ್ಪಿಸಲು ನಿರ್ಧರಿಸಿದರು. ಈ ಸಮಿತಿಗೆ ಗಾಂಧೀಜಿಯೇ ಅಧ್ಯಕ್ಷರು. ಈ ಹಣ ಕೂಡಿಸಿ ನಿಧಿ ಅರ್ಪಿಸುವ ಮೊದಲೇ ಗಾಂಧೀಜಿ ಸೆರೆಮನೆಯಿಂದ ಬಿಡುಗಡೆ ಹೊಂದಿ ಕಸ್ತೂರಬಾ ಸ್ಮಾರಕ ಸಮಿತಿಯ ಅಧ್ಯಕ್ಷಪದವಿ ವಹಿಸಿಕೊಂಡರು. ಗಾಂಧೀಜಿಯವರು ಈ ನಿಧಿಯ ಉಪಯೋಗದ ವಿಷಯ ಮಾತನಾಡುತ್ತಾ " ಈ ನಿಧಿಯ ಮುಕ್ಕಾಲು ಪಾಲು ಹಣವನ್ನು ಆಯಾ ದೇಶಗಳಲ್ಲಿಯೇ ಉಪಯೋಗಿಸಲಾಗುತ್ತದೆ. ಬಾಗೆ ಇಷ್ಟವಾದ ಗ್ರಾಮಗಳಲ್ಲಿ ಹಿಂದುಳಿದ

ಮಹಿಳೆಯರ ಮತ್ತು ಮಕ್ಕಳ ವಿದ್ಯಾಭ್ಯಾಸ, ಪುರೋಭಿವೃದ್ಧಿಗೋಸ್ಕರವಾಗಿ ಉಪಯೋಗಿಸಲಾಗುತ್ತದೆ” ಎಂದರು.

ಗಾಂಧೀಜಿ ಹುಟ್ಟಿದ ಹಬ್ಬಕ್ಕೆ ಕಸ್ತೂರಬಾ ನಿಧಿಯು ಗಾಂಧೀಜಿಗೆ ಬಹುಮಾನ. ಇದಕ್ಕಿಂತ ಹೆಚ್ಚಿನ ಯೋಗ್ಯವಾದ ಬಹುಮಾನ ಇನ್ನೇನಿದೆ?

ಕಸ್ತೂರಬಾ ಚಿರಂಜೀವಿ! ಒಂದೊಂದು ಯುಗಕ್ಕೆ ಒಬ್ಬೊಬ್ಬರು ನಾರೀಮಣಿಯರು ಅವತಾರವಾದರು. ಚಂದ್ರಮತಿ, ಸೀತೆ, ದ್ರೌಪದಿ, ದಮಯಂತಿ, ಶಾರದಾಮಣಿದೇವಿ ಇವರೆಲ್ಲರ ಗುಂಪಿಗೆ ಕಸ್ತೂರಬಾನೂ ಸೇರಿದರು. ಭಾರತದ ನಾರೀಮಣಿಯರು ಬಾನ ಕೆಲಸವನ್ನು ಮುಂದರಿಸಬೇಕು. ಸಾಧ್ವೀಶಿರೋಮಣಿ ಕಸ್ತೂರಬಾನ ಸ್ವಾತಂತ್ರ್ಯಮಂತ್ರ ಭಾರತದ ಸ್ತ್ರೀಯರೆಲ್ಲರ ಹೃದಯದಲ್ಲಿ ಮಿಡಿಯಬೇಕು. ಆಗ ಬಾನ ಹೃದಯವು ಹಿಗ್ಗೀತು, ಬಾನ ಆತ್ಮಕ್ಕೆ ಆಗಲೇ ಶಾಂತಿ.

## ನಿಧಿ ಸಮರ್ಪಣೆ

ಬಾನ ಸ್ಮಾರಕಕ್ಕಾಗಿ ೭೫ ಲಕ್ಷ ರೂಪಾಯಿ ಬೇಕೆಂದು ಬಿನ್ನೈಸಿಕೊಂಡರು. ದೇಶದಲ್ಲಿ ಹಣ ಪ್ರೀತಿಯೊಡನೆ ತುಂಬಿಬಂತು. ೭೫ ಲಕ್ಷವಲ್ಲ; ೭೫ ಕೋಟಿಯನ್ನು ಸುರಿದಾರು ಭಾರತದ ದಾನಿಗಳು. ಗಾಂಧೀಜಿಯ ಹುಟ್ಟಿದ ಹಬ್ಬದಲ್ಲಿ ಈ ಬಹುಮಾನ ಗಾಂಧೀಜಿಗೆ ಕೊಟ್ಟರು. ಆಗಲೇ ೮೦ ಲಕ್ಷಕ್ಕೆ ಮೀರಿತ್ತು. ಇಂದು ೧ ಕೋಟಿ ೨೪ ಲಕ್ಷಕ್ಕೇರಿದೆ ಈ ನಿಧಿ. ಬಾನ ಮೂಕ ಜೀವನದ ಪ್ರತಿಭೆ ತಿಳಿಯದೆಯೇ ದೇಶದ ಹಳ್ಳಿ ಹಳ್ಳಿಗಳಲ್ಲಿಯೂ ಮೂಡಿದುದರ ನಿದರ್ಶನವಿದು.

ಸೇವಾಗ್ರಾಮದಲ್ಲಿ ಅಕ್ಟೋಬರ್ ೨ನೆಯ ತಾರೀಖು ಸಂಭ್ರಮವೇ ಸಂಭ್ರಮ. ಯುಗಮೂರ್ತಿ ೭೪ ಬೇಸಿಗೆಗಳನ್ನು ಕಳೆದು ೭೫ನೇ ಬೇಸಿಗೆ ಕಳೆಯಲು ಕಾಲಿಟ್ಟ ದಿನ. ಜೀವನದ ಉಸಿರಾದ ಹಿಂದೂ ಮುಸ್ಲಿಂ ಐಕ್ಯತೆ ಸಂಧಾನದಲ್ಲಿ ಜಯಹೊಂದದೆ ನಿರಾಶೆಯಾದರೂ ಆಸೆಯಿಟ್ಟುಕೊಂಡು ಹೊಸಯುಗದ ಹೊಸ ಅಂತರವಾಣಿಗಾಗಿ ಕಾಯುತ್ತಿದ್ದ ದಿನ ಅಂದೇ ಬಾ

ತನ್ನ ಕಾಲು ಚಾಚಿ ಬಾನ ಹತ್ತಿರ ಇಣಿಕಿನೋಡುತ್ತಿರುವಾಗ ಗಾಂಧೀಜಿ ಎಂದರು, " ಬಾ, ನಿನ್ನ ಆತ್ಮ ಹೊರಡಲೆತ್ನಿಸುತ್ತಿದೆ. ಶಾಂತಳಾಗಿ ನೀನು ಹೋಗಿ ಬ್ರಹ್ಮನನ್ನು ಸೇರು " ಎಂದು.

ಮಂಗಳವಾರ ಸಂಜೆ ಆರೂವರೆ ಗಂಟೆ. ಗಾಂಧೀಜಿ, ಬಾನ ಮಕ್ಕಳು ಪ್ರೀತಿಯ ದೇವದಾಸ, ರಾಮದಾಸ, ಮೊಮ್ಮಕ್ಕಳು ಎಲ್ಲರೂ ಆಕೆಯ ಬಳಿ ಕೂಡಿದ್ದರು. ಆಶ್ರಮದ ಪ್ರೀತಿಯ ಹಾಡಾದ,

**" ರಘುಪತಿ ರಾಘವ ರಾಜಾರಾಂ ಪತಿತ ಪಾವನ ಸೀತಾರಾಂ "**

ಹಾಡಿದ ಮೇಲೆ ಏಳೂವರೆ ಗಂಟೆಗೆ ಬಾನ ಪ್ರಾಣಪಕ್ಷಿ ಹಾರಿಹೋಯಿತು. ಭಜನೆಯ ನಾದಲೀಲೆಯ ವೈಭವದಲ್ಲಿ ಬಾ ಭಗವಂತನನ್ನು ಸೇರಿದರು.

ಬಾ ನಮ್ಮನ್ನಗಲಿದರು. ಗಾಂಧೀಜಿಯ ರಸಕೋಮಲವಾದ ಜೀವಕ್ಕೆ ಈ ದುಃಖ ಎಷ್ಟೋ ಏನೋ! ಗಾಂಧೀಜಿ ಗೀತೆಯ 'ದೇಹ ಅಶಾಶ್ವತ' ಎಂಬ ತತ್ವವನ್ನು ಮನಗಂಡಿರುವರಾದರೂ, ಈ ನೋವು ಹೆಚ್ಚಿನ ಪರಿಣಾಮ ಮಾಡದೆ ಇಲ್ಲ. ಗಾಂಧೀಜಿಯ ಮನಸ್ಸಿಗೆ ತೆರೆತೆರೆಯಾಗಿ ಬಂದು ತಾಕುತ್ತಿರುವ ಈ ನೋವು, ಈ ಹಾಲಾಹಲ ಮುಂದೆ ಬರಲಿರುವ ಅಮೃತಕಲಶದ ಸೂಚನೆಯಾಯಿತು.

ಬಾನ ಭೌತಿಕ ದೇಹ ಭಸ್ಮೀಭೂತವಾಗಿದ್ದರೂ ಅವರು ಯಾವ ಧ್ಯೇಯಕ್ಕಾಗಿ ದುಡಿದು ಪ್ರಾಣ ನೀಗಿದರೋ ಅದು ಚಿರಸ್ಥಾಯಿಯಾಗಿ ನಿಲ್ಲುವುದು. ಆ ಕೆಲಸಕ್ಕೆ, ಆ ನೆನಪಿಗೆ ಸ್ಮಾರಕವೊಂದು ಆವಶ್ಯಕವೆಂದು ತಿಳಿದು ಭಾರತದ ಹಿರಿಯ ಅಣ್ಣಂದಿರು ಬಾ ಸ್ಮಾರಕ ನಿಧಿಯೊಂದನ್ನು ಗಾಂಧೀಜಿಯ ಹುಟ್ಟುಹಬ್ಬದ ದಿನ ಕೊಡಲು ನಿಶ್ಚಯಿಸಿದರು. ಗಾಂಧೀಜಿಗೆ ೭೫ ವರ್ಷ ತುಂಬುವುದರಿಂದ ೭೫ ಲಕ್ಷ ರೂಪಾಯಿ ನಿಧಿ ಅರ್ಪಿಸಲು ನಿರ್ಧರಿಸಿದರು. ಈ ಸಮಿತಿಗೆ ಗಾಂಧೀಜಿಯೇ ಅಧ್ಯಕ್ಷರು. ಈ ಹಣ ಕೂಡಿಸಿ ನಿಧಿ ಅರ್ಪಿಸುವ ಮೊದಲೇ ಗಾಂಧೀಜಿ ಸೆರೆಮನೆಯಿಂದ ಬಿಡುಗಡೆ ಹೊಂದಿ ಕಸ್ತೂರಬಾ ಸ್ಮಾರಕ ಸಮಿತಿಯ ಅಧ್ಯಕ್ಷಪದವಿ ವಹಿಸಿಕೊಂಡರು. ಗಾಂಧೀಜಿಯವರು ಈ ನಿಧಿಯ ಉಪಯೋಗದ ವಿಷಯ ಮಾತನಾಡುತ್ತಾ " ಈ ನಿಧಿಯ ಮುಕ್ಕಾಲು ಪಾಲು ಹಣವನ್ನು ಆಯಾ ದೇಶಗಳಲ್ಲಿಯೇ ಉಪಯೋಗಿಸಲಾಗುತ್ತದೆ. ಬಾಗೆ ಇಷ್ಟವಾದ ಗ್ರಾಮಗಳಲ್ಲಿ ಹಿಂದುಳಿದ

ಮಹಿಳೆಯರ ಮತ್ತು ಮಕ್ಕಳ ವಿದ್ಯಾಭ್ಯಾಸ, ಪುರೋಭಿವೃದ್ಧಿಗೋಸ್ಕರವಾಗಿ ಉಪಯೋಗಿಸಲಾಗುತ್ತದೆ” ಎಂದರು.

ಗಾಂಧೀಜಿ ಹುಟ್ಟಿದ ಹಬ್ಬಕ್ಕೆ ಕಸ್ತೂರಬಾ ನಿಧಿಯು ಗಾಂಧೀಜಿಗೆ ಬಹುಮಾನ. ಇದಕ್ಕಿಂತ ಹೆಚ್ಚಿನ ಯೋಗ್ಯವಾದ ಬಹುಮಾನ ಇನ್ನೇನಿದೆ?

ಕಸ್ತೂರಬಾ ಚಿರಂಜೀವಿ! ಒಂದೊಂದು ಯುಗಕ್ಕೆ ಒಬ್ಬೊಬ್ಬರು ನಾರೀಮಣಿಯರು ಅವತಾರವಾದರು. ಚಂದ್ರಮತಿ, ಸೀತೆ, ದ್ರೌಪದಿ, ದಮಯಂತಿ, ಶಾರದಾಮಣಿದೇವಿ ಇವರೆಲ್ಲರ ಗುಂಪಿಗೆ ಕಸ್ತೂರಬಾನೂ ಸೇರಿದರು. ಭಾರತದ ನಾರೀಮಣಿಯರು ಬಾನ ಕೆಲಸವನ್ನು ಮುಂದರಿಸ ಬೇಕು. ಸಾಧ್ವೀಶಿರೋಮಣಿ ಕಸ್ತೂರಬಾನ ಸ್ವಾತಂತ್ರ್ಯಮಂತ್ರ ಭಾರತದ ಸ್ತ್ರೀಯರೆಲ್ಲರ ಹೃದಯದಲ್ಲಿ ಮಿಡಿಯಬೇಕು. ಆಗ ಬಾನ ಹೃದಯವು ಹಿಗ್ಗೀತು, ಬಾನ ಆತ್ಮಕ್ಕೆ ಆಗಲೇ ಶಾಂತಿ.

## ನಿಧಿ ಸಮರ್ಪಣೆ

ಬಾನ ಸ್ಮಾರಕಕ್ಕಾಗಿ ೭೫ ಲಕ್ಷ ರೂಪಾಯಿ ಬೇಕೆಂದು ಬಿನ್ನೈಸಿ ಕೊಂಡರು. ದೇಶದಲ್ಲಿ ಹಣ ಪ್ರೀತಿಯೊಡನೆ ತುಂಬಿಬಂತು. ೭೫ ಲಕ್ಷವಲ್ಲ; ೭೫ ಕೋಟಿಯನ್ನು ಸುರಿದಾರು ಭಾರತದ ದಾನಿಗಳು. ಗಾಂಧೀಜಿಯ ಹುಟ್ಟಿದ ಹಬ್ಬದಲ್ಲಿ ಈ ಬಹುಮಾನ ಗಾಂಧೀಜಿಗೆ ಕೊಟ್ಟರು. ಆಗಲೇ ೮೦ ಲಕ್ಷಕ್ಕೆ ಮಿಾರಿತ್ತು. ಇಂದು ೧ ಕೋಟಿ ೨೪ ಲಕ್ಷಕ್ಕೇರಿದೆ ಈ ನಿಧಿ. ಬಾನ ಮೂಕ ಜೀವನದ ಪ್ರತಿಭೆ ತಿಳಿಯದೆಯೇ ದೇಶದ ಹಳ್ಳಿ ಹಳ್ಳಿ ಗಳಲ್ಲಿಯೂ ಮೂಡಿದುದರ ನಿದರ್ಶನವಿದು.

ಸೇವಾಗ್ರಾಮದಲ್ಲಿ ಅಕ್ಟೋಬರ್ ೨ನೆಯ ತಾರೀಖು ಸಂಭ್ರಮವೇ ಸಂಭ್ರಮ. ಯುಗಮೂರ್ತಿ ೭೪ ಬೇಸಿಗೆಗಳನ್ನು ಕಳೆದು ೭೫ನೇ ಬೇಸಿಗೆ ಕಳೆಯಲು ಕಾಲಿಟ್ಟ ದಿನ. ಜೀವನದ ಉಸಿರಾದ ಹಿಂದೂ ಮುಸ್ಲಿಂ ಐಕ್ಯತೆ ಸಂಧಾನದಲ್ಲಿ ಜಯಹೊಂದದೆ ನಿರಾಶೆಯಾದರೂ ಆಸೆಯಿಟ್ಟುಕೊಂಡು ಹೊಸಯುಗದ ಹೊಸ ಅಂತರವಾಣಿಗಾಗಿ ಕಾಯುತ್ತಿದ್ದ ದಿನ ಅಂದೇ ಬಾ

ನಿಧಿಯನ್ನು ಸಮರ್ಪಿಸಿದರು ಬಾಪೂಗೆ. ಹಿಂದೂ ಮುಸ್ಲಿಂ ಐಕ್ಯದ ಸಂಧಾನವಾಗಲಿಲ್ಲವಲ್ಲಾ ಎಂಬ ನೋವೊಂದುಕಡೆ. ಮಹಿಳೆಯರ ಮತ್ತು ಮಕ್ಕಳ ಅಭಿವೃದ್ಧಿಗಾಗಿ ಈ ನಿಧಿ ಬಂತಲ್ಲಾ ಎಂಬ ಸಂತೋಷ. ಜೀವನ ದಲ್ಲಿ ಸಿಹಿ, ಕಹಿ ಜೊತೆ ಜೊತೆಗೆ. ಆದರೆ ಗಾಂಧೀಜಿ ವ್ಯಕ್ತಿಯ ಮಟ್ಟವನ್ನು ಮೀರಿ, ಶಕ್ತಿಯಾದ್ದರಿಂದ ಸಿಹಿ, ಕಹಿ ಎಲ್ಲಾ ಒಂದೇ ಏನೋ.

ಆಗಾಖಾನ ಸೆರೆ (ಅರ) ಮನೆಯಲ್ಲಿ ಬಾನ ಸಂಗಾತಿಯಾಗಿದ್ದ ಭಾರತದ ಕಣ್ಮಣಿ, ಸರೋಜಿನಿನಾಯ್ಡುರವರೇ ಗಾಂಧೀಜಿಗೆ ತಿಲಕವನ್ನಿಟ್ಟು ಈ ನಿಧಿಸಮರ್ಪಣೆಮಾಡಿದರು. ಆಗ ಒಂದು ತಮಾಷೆ ನಡೆಯಿತು. ನಿಧಿ ಯನ್ನು ಕೈಯಲ್ಲಿ ಹಿಡಿದುಕೊಂಡು ಗಾಂಧೀಜಿಗೆ ಕೊಡುವಾಗ, ಸರೋಜಿನಿ ದೇವಿ "ಈ ನಿಧಿಯನ್ನು ನಾನು ತೆಗೆದುಕೊಂಡು ಓಡಿಹೋದರೆ ನೀವೇನು ಮಾಡುವಿರಿ" ಎಂದರು. ಆಗ ಗಾಂಧೀಜಿ "ಈ ನಿಧಿಯನ್ನು ತೆಗೆದು ಕೊಂಡು ನೀನು ಓಡಿಹೋದರೆ ಅದು ಸರಿಯಾಗಿ ವಿನಿಯೋಗಿಸುವ ಸಾಮರ್ಥ್ಯವುಳ್ಳವಳು ನೀನು. ಆದ್ದರಿಂದ ನನಗೇನೂ ಹೆದರಿಕೆ ಇಲ್ಲ" ಎಂದರು.

ಗಾಂಧೀಜಿ ಸೇವಾಗ್ರಾಮಕ್ಕೆ ಬಂದಾಗ, ಮಹದೇವಭಾಯಿ, ಕಸ್ತೂರಿ ಬಾನ ಗುಡಿಸಿಲಿನ ಬಳಿಗೆ ಹೋದರು. ಬಾನ ಗುಡಿಸಿಲಿನ ಬಳಿಗೆ ಹೋದಾಗ ದುಃಖ ತುಂಬಿ ಬಂತು. ಮನಸ್ಸು ಕರಗಿತು. ಹಳೆಯ ನೆನಪನ್ನು ಜ್ಞಾಪಕಮಾಡಿಕೊಂಡರೇ ಗಾಂಧೀಜಿ ? ಈಗ ಬಾನ ಗುಡಿಸಿಲಿ ನಲ್ಲಿ ಪ್ರತಿದಿನ ಸಂಜೆ ೪ ಘಂಟೆಗೆ ಆಶ್ರಮವಾಸಿಗಳೆಲ್ಲಾ ಬಂದು ನೂಲು ತ್ತಾರೆ. ಗಾಂಧೀಜಿಯೂ ಇದರಲ್ಲಿ ಭಾಗವಹಿಸುತ್ತಾರೆ.

ಬಾ ನಿಧಿಯ ವಿನಿಯೋಗಕ್ಕಾಗಿ ಎಲ್ಲಾ ಪ್ರಾಂತ್ಯಗಳಲ್ಲಿಯೂ ಸಮಿತಿ ಗಳನ್ನೇರ್ಪಡಿಸಿ ಕೆಲಸ ಪ್ರಾರಂಭಿಸಿದ್ದಾರೆ. ನಿಧಿ ಕೂಡಿಸುವ ಸಮಿತಿಗಳು ಕಾರ್ಯಕ್ರಮ ಮಾಡುವ ಸಮಿತಿಗಳಾಗಿ ಮಾರ್ಪಟ್ಟಿವೆ. ಸೇವಾಗ್ರಾಮ ದಲ್ಲಿ ಹಳ್ಳಿಗಳ ಮಹಿಳೆಯರ ತರಬೇತಿಗಾಗಿ, ಮಹಿಳಾ ಸ್ವಯಂಸೇವಕರ ತರಬೇತಾಗುತ್ತಿದೆ. ಇನ್ನೂ ಹೆಚ್ಚಿನ ಸಂಖ್ಯೆಯಲ್ಲಿ ಆಗುವುದರಲ್ಲಿದೆ.

ಬಾ ನಿಧಿಯ ಶೇಖರಣೆ ಮೈಸೂರು ಸಂಸ್ಥಾನದಲ್ಲಿಯೂ ತುಂಬ ಹುರುಪಿನಿಂದ ನಡೆಯಿತು. ನಮಗೆ ಕೇವಲ ೨ ಲಕ್ಷ ರೂಪಾಯಿಗಳನ್ನು

ಶೇಖರಿಸಲು ನಮ್ಮ ಪಾಲಿಗೆ ಬಂದ ಭಾಗ್ಯ. ಗಾಂಧೀಜಿ ಹುಟ್ಟಿದ ಹಬ್ಬದ ಹೊತ್ತಿಗೆ ೨ ಲಕ್ಷ ೭೫ ಸಾವಿರವಾಯಿತು. ಮೈಸೂರ ಜನ ತೋರಿಸಿ ಕೊಟ್ಟರು ಬಾನಲ್ಲಿ ಅವರ ಪ್ರೇಮ, ಭಕ್ತಿ ಮತ್ತು ವಿಶ್ವಾಸವನ್ನು.

"ಬಾ"ಗೆ ಇಂದು ಶಾಂತಿ ದೊರೆತಿದೆ. ಆದರೆ ಆ ಶಾಂತಿಯನ್ನು ಸ್ಥಿರವಾಗಿ ಕಾಪಾಡಬೇಕಾದ ಕಾರ್ಯಭಾರ, ಜವಾಬ್ದಾರಿ ನಮ್ಮ ಮೇಲೆ ಬಿದ್ದಿದೆ. ನಮ್ಮ ತಾಯಂದಿರು, ಅಕ್ಕತಂಗಿಯರು, ಈ ಶಾಂತಿಯ ಗುಟ್ಟನ್ನೇ ಅರಿತು, ಬಾ ಹೋದ ಜಾಡನ್ನೇ ಹಿಡಿದು ಹೋಗಲು ಪ್ರಯತ್ನಿಸಬೇಕು. "ಬಾ" ಮುಗುಳ್ನಗೆ ಬೀರಿ ಆಶೀರ್ವದಿಸುತ್ತಿದ್ದಾಳೆ. ಹರಸುತ್ತಿದ್ದಾಳೆ. ಅಗೋ ಅಲ್ಲಿ ನೋಡಿ! ಪಡುವಣದಿಕ್ಕಿನ ಮೂಲೆಯೊಂದರಲ್ಲಿ ಪ್ರಕಾಶಿಸುತ್ತಿರುವ ಆ ಬೆಳಕೇ—ಆ ತಾರೆಯೇ "ಬಾ". ಕ್ಷಣ ಕ್ಷಣದಲ್ಲಿಯೂ 'ಬಾ' ನಮ್ಮ ಸ್ಫೂರ್ತಿಯಾಗಲಿ.



# ವಿಜಯಲಕ್ಷ್ಮಿ ಪಂಡಿತ್

ಭಾರತಕ್ಕೆ ನೆಹರೂ ಮನೆತನವೇ ಒಂದು ದೊಡ್ಡ ಆಸ್ತಿ. ನೆಹರೂ ಮನೆತನದಲ್ಲಿ ಹುಟ್ಟಿದ ಪ್ರತಿಯೊಬ್ಬರೂ ತಮ್ಮ ಸ್ವಸುಖವನ್ನು ಲೆಕ್ಕಿಸದೆ ಭಾರತಕ್ಕೋಸ್ಕರ, ಕಾಯಾ, ವಾಚಾ, ಮನಸಾ ದುಡಿದಿದ್ದಾರೆ. ಭಾರತ ಮಾತೆಯೇ ನೆಹರೂ ಮನೆತನದವರಿಗೆ ತಾಯಿ. ಭಾರತೀಯರೇ ಅವರ ಸಂಸಾರ. ಇಂತಹ ಮನೆತನದಲ್ಲಿ ಹುಟ್ಟಿದ ಶ್ರೀಮತಿ ವಿಜಯಲಕ್ಷ್ಮಿ ಪಂಡಿತ್‌ರವರನ್ನು ಭಾರತದ ಶ್ರೇಷ್ಠ ನಾರೀಮಣಿಯರಲ್ಲೊಬ್ಬರೆಂದರೆ ಅತಿ ಶಯೋಕ್ತಿಯೇನಲ್ಲ.

## ಮಾತಾಪಿತೃಗಳು

ವಿಜಯಲಕ್ಷ್ಮಿ ಪಂಡಿತ್‌ರವರು ಮೋತೀಲಾಲ್ ನೆಹ್ರೂ ಮತ್ತು ಸ್ವರೂಪರಾಣಿಯವರಿಗೆ ಪ್ರೀತಿಯ ಮಗಳಾಗಿ ಜನಿಸಿದರು. ಇವರ ತಂದೆ ಮೋತಿಲಾಲ್ ನೆಹ್ರೂರವರು ಹುಟ್ಟಿದ್ದು 1861 ನೇ ಇಸವಿ ಮೇ 6ನೇ, ತಾರೀಖು. ಇವರು ವಕೀಲಿ ಪರೀಕ್ಷೆಯಲ್ಲಿ ಶ್ರೇಷ್ಠದರ್ಜೆಯಲ್ಲಿ ತೇರ್ಗಡೆ ಹೊಂದಿ ಚಿನ್ನದ ಪದಕವನ್ನು ಪಡೆದು ಅಲಹಾಬಾದಿನಲ್ಲಿ ಶ್ರೇಷ್ಠ ವಕೀಲ ರಾಗಿದ್ದರು. ಅಲ್ಲಿಯೇ **'ಆನಂದ ಭವನ'** ಎಂಬ ಅರಮನೆಯನ್ನು ಕಟ್ಟಿದರು. ಇದೇ ಮನೆಯಲ್ಲಿಯೇ ಶ್ರೀಮತಿ ವಿಜಯಲಕ್ಷ್ಮಿಪಂಡಿತ್‌ರವರು ಹುಟ್ಟಿದ್ದು.

# ಬಾಲ್ಯ ಜೀವನ

ಮೋತಿಲಾಲ್ ನೆಹ್ರೂರವರಿಗೆ ತಮ್ಮ ೨೦ನೇ ವಯಸ್ಸಿನಲ್ಲಿ ಈಗ ಭಾರತದ ಪ್ರಧಾನ ಮಂತ್ರಿಗಳಾಗಿರುವ ಪಂಡಿತ ಜವಹರಲಾಲ್ ನೆಹ್ರೂರವರು ಹುಟ್ಟಿದರು. ವಿಜಯಲಕ್ಷ್ಮಿಪಂಡಿತ್‌ರವರು ತಮ್ಮ ಅಣ್ಣಂದಿರಿಗಿಂತ ೧೧ ವರ್ಷ ಚಿಕ್ಕವರು. ಇವರು ಹುಟ್ಟಿದ್ದು ೧೯೦೦ನೇ ಇಸವಿ. ಮೋತಿಲಾಲ್ ನೆಹ್ರೂರವರಿಗೂ ಮತ್ತು ತುಂಟುಹುಡುಗನಾದ ೧೧ ವರ್ಷದ ಜವಹರನಿಗೂ ವಿಜಯಲಕ್ಷ್ಮಿಯ ಜನನದಿಂದ ಅತಿಸಂತೋಷವಾಯಿತು. ಮಗುವಿಗೆ 'ಸ್ವರೂಪಾ' ಎಂದು ನಾಮಕರಣ ಮಾಡಿದರು. 'ಆನಂದ ಭವನ'ದಲ್ಲಿ ಒಂದು ಸುಂದರವಾದ ತೋಟ ಮತ್ತು ಈಜುವ ಕೊಳವಿತ್ತು. ಕೆಲವು ಕಾಲಾನಂತರ ಈ ಮನೆಯನ್ನು ಪಂಡಿತ ಮೋತಿಲಾಲ್‌ರು 'ಅಖಿಲ ಭಾರತ ರಾಷ್ಟ್ರೀಯ ಸಂಸ್ಥೆ'ಗೆ ದಾನಮಾಡಿ ತಮ್ಮ ಉಪಯೋಗಕ್ಕಾಗಿ ಬೇರೆ ಮನೆಯನ್ನು ಕಟ್ಟಿಸಿಕೊಂಡರು. ಏಳು ವರ್ಷಗಳ ನಂತರ ಮತ್ತೊಂದು ಹೆಣ್ಣು ಮಗು ಹುಟ್ಟಿತು. ಆ ಮಗುವಿನ ಹೆಸರು ಕೃಷ್ಣಾ. ಈ ಮೂರು ಮಕ್ಕಳೂ ಆಂಗ್ಲ ರೀತಿಯಲ್ಲಿ ಬೆಳೆಸಲ್ಪಟ್ಟರು.

ಸ್ವರೂಪಾ ಕೇವಲ ಚಿಕ್ಕವಯಸ್ಸಿನಲ್ಲಿಯೇ ತನ್ನ ತಂದೆ ತಾಯಿಗಳ ಜೊತೆಯಲ್ಲಿ ಯೂರೋಪಿಗೆ ಹೋಗಿದ್ದಳು. ಈ ಸಮಯದಲ್ಲಿಯೇ ಆಂಗ್ಲ ಉಪಾಧ್ಯಾಯಿನಿಯನ್ನು ಅವಳ ತಂದೆ ನೇಮಕಮಾಡಿದರು. ಮೋತಿಲಾಲ್ ನೆಹ್ರೂರವರು ತಮ್ಮ ಮಕ್ಕಳನ್ನು ಪಾಠಶಾಲೆಗೆ ಕಳುಹಿಸಲು ಇಷ್ಟಪಡುತ್ತಿರಲಿಲ್ಲ. ಅವಳ ದೃಷ್ಟಿಯಲ್ಲಿ ಒಬ್ಬ ತರುಣಿಗೆ ಅವಶ್ಯಕವಾಗಿರಬೇಕಾದ್ದೆಂದರೆ ಪಿಯಾನೋವನ್ನು ಬಾರಿಸುವುದು, ಇತರರೊಡನೆ ಸಂಭಾಷಿಸುವುದು ಮತ್ತು ಒಬ್ಬ ಉಪಾಧ್ಯಾಯಿನಿಯಿಂದ ಕ್ರಮವಾದ ಪಾಠಗಳನ್ನು ಹೇಳಿಸಿಕೊಳ್ಳುವುದು. ಆದ್ದರಿಂದ ಸ್ವರೂಪಾಳು ಯಾವ ಶಾಲೆಗೂ ಹೋಗದೆ ಮನೆಯಲ್ಲಿಯೇ ತನ್ನ ವಿದ್ಯಾಭ್ಯಾಸವನ್ನು ಮುಗಿಸಿದಳು. ಬೇರೆ ಬೇರೆ ವಿಷಯಗಳಿಗಾಗಿ ಇತರ ಉಪಾಧ್ಯಾಯರುಗಳೂ ಅವಳಿಗಾಗಿ ನೇಮಿಸಲ್ಪಟ್ಟರು. ಪಾಠಶಾಲೆಗೆ ಕಳುಹಿಸದಿದ್ದರೂ ಮನೆಯಲ್ಲಿಯೇ ಅವಳಿಗೆ ಎಲ್ಲಾ ಸ್ವಾತಂತ್ರ್ಯವನ್ನು ಮೋತಿಲಾಲ್ ನೆಹ್ರೂರವರು ಕೊಟ್ಟಿದ್ದರು.

ಕುದುರೆ ಸವಾರಿ, ಈಜುವುದು, ಆಟಗಳನ್ನು ಆಡುವುದು, ಮುಂತಾದ ಸೌಲಭ್ಯಗಳನ್ನು ಮನೆಯಲ್ಲಿಯೇ ಏರ್ಪಡಿಸಿದ್ದರು. ಆದರೆ ಚಲನಚಿತ್ರ ಗಳಿಗೆ ಮಾತ್ರ ಕಳುಹಿಸುತ್ತಿರಲಿಲ್ಲ. ಸ್ವರೂಪಾಳ ಉಪಾಧ್ಯಾಯಿನಿಯೂ ಚಲನಚಿತ್ರಕ್ಕೆ ಹೋಗುವುದನ್ನು ಮೆಚ್ಚುತ್ತಿರಲಿಲ್ಲ.

ಮೋತಿಲಾಲ್ ನೆಹ್ರೂರವರು ರಾಜಕೀಯ ವ್ಯಕ್ತಿಗಳೂ ಆಗಿದ್ದುದ ರಿಂದ ಅವರ ಮನೆಗೆ ಇಂಡಿಯಾ ದೇಶದ ಎಲ್ಲಾ ಮುಂದಾಳುಗಳೂ ಬಂದು ಹೋಗುತ್ತಿದ್ದರು. ಹೀಗೆ ಸ್ವರೂಪಾ ತನ್ನ ಚಿಕ್ಕವಯಸ್ಸಿನಲ್ಲಿಯೇ ದೇಶದ ದೊಡ್ಡ ದೊಡ್ಡ ಮನುಷ್ಯರ ಹತ್ತಿರ ಸಂಪರ್ಕವಿಟ್ಟುಕೊಂಡಿದ್ದಳು. ೧೯೧೫ರಲ್ಲಿ ಮೊದಲನೇ ಮಹಾಯುದ್ಧವು ಪ್ರಾರಂಭವಾದ್ದರಿಂದ ಕೆಲವು ರಾಜಕೀಯ ಕಾರಣಗಳಿಗಾಗಿ ಮೋತಿಲಾಲ್ ನೆಹ್ರೂರವರು ಬೊಂಬಾಯಿಗೆ ಹೋಗ ಬೇಕಾಯಿತು. ಅಖಿಲ ಭಾರತ ರಾಷ್ಟ್ರೀಯ ಸಂಸ್ಥೆ ಮತ್ತು ಮುಸ್ಲಿಂ ಲೀಗ್ ಒಂದೇ ವಾರದಲ್ಲಿ ತಮ್ಮ ಅಧಿವೇಶನ ಕಾಲವನ್ನು ಬೊಂಬಾಯಿಯಲ್ಲಿ ನಡೆಸ ಬೇಕೆಂದು ತೀರ್ಮಾನ ಮಾಡಿಕೊಂಡಿದ್ದವು. ಸ್ವರೂಪಾ ತನ್ನ ತಂದೆಯ ಜೊತೆಯಲ್ಲಿಯೇ ಪ್ರಯಾಣಮಾಡಿದಳು. ಮೋತೀಲಾಲ್ ನೆಹ್ರೂರವರಿಗೆ ಅಲ್ಲಿ ರಾಜಕೀಯ ಕಾರಣಗಳಿತ್ತಾದರೂ ವಿಜಯಲಕ್ಷ್ಮಿಗೆ ಇದು ಕೇವಲ ತಮಾಷೆಯಾಗಿತ್ತು. ಅಲ್ಲಿ ನಡೆದ ಭಾಷಣಗಳಾಗಲೀ, ಮಂತ್ರಾಲೋಚನೆ ಯಾಗಲೀ ಸ್ವರೂಪಾಳ ಮೇಲೆ ಯಾವ ಪರಿಣಾಮವನ್ನುಂಟುಮಾಡಲಿಲ್ಲ. "೧೯೧೫ರಲ್ಲಿ ಕಾಂಗ್ರೆಸ್ ಹೇಗಿತ್ತೆಂದರೆ, ಅದರ ಜನರು ತಮ್ಮಲ್ಲಿದ್ದ ಅತಿ ಉತ್ತಮವಾದ ಬಟ್ಟೆಯನ್ನು ಹಾಕಿಕೊಂಡು ಇಂಡಿಯಾ ದೇಶದ ಬೇರೆ ಬೇರೆ ಭಾಗಗಳಿಂದ ಬಂದ ಜನರನ್ನು ಭೇಟಿ ಮಾಡುವುದಷ್ಟೇ ಅವರಿಗೆ ಕೆಲಸ ವಾಗಿತ್ತು", ಎನ್ನುತ್ತಾಳೆ ೧೫ ವರ್ಷದ ವಿಜಯಲಕ್ಷ್ಮಿ.

ಸ್ವರೂಪಾಳು ೧೭ ವರ್ಷದವಳಾದಾಗ, ಉಪಾಧ್ಯಾಯಿನಿಯಾದ ಮಿಸ್ ಹೂಪರ್ ತನ್ನ ಮಿತ್ರನೊಬ್ಬನನ್ನು ಮದುವೆಯಾಗಿ ಹೊರಟು ಹೋದಳು. ಇದುವರೆಗೂ ಸ್ವರೂಪಾಳು ದೇಶದ ಕಷ್ಟ ನಷ್ಟಗಳೊಂದನ್ನೂ ಅರಿಯದ ಮುಗ್ಧಬಾಲಕಿಯಾಗಿದ್ದಳು. ಇವಳ ಗವರ್ನೆಸ್ ಹೊರಟು ಹೋದಮೇಲೆ ಇವಳಲ್ಲಿ ತೀವ್ರ ಬದಲಾವಣೆಯಾಯಿತು. ಬ್ರಿಟಿಷರ ಕ್ರೂರ ಆಡಳಿತ ನೀತಿಯ ಅರಿವಾಯಿತು. ದೇಶದಲ್ಲಿ ರಾಜಕೀಯ ಬದಲಾವಣೆ

ಗಳು ಹೇಗಾದವೋ ಹಾಗೆಯೇ ನೆಹರೂ ಮನೆತನದಲ್ಲಿಯೂ ಬದಲಾವಣೆ ಗಳು ಉಂಟಾದವು.

## ಗಾಂಧೀಜಿ-ನೆಹರು ಸಮಾಗಮ

ಮಹಾತ್ಮಾ ಗಾಂಧಿಯವರು ಅಲಹಾಬಾದಿಗೆ ಭೇಟಿಕೊಟ್ಟು ಮೋತೀ ಲಾಲ್ ನೆಹ್ರೂರವರೊಡನೆ ಭಾರತ ಸ್ವಾತಂತ್ರ್ಯ ಹೋರಾಟದ ವಿಷಯವಾಗಿ ಮಾತುಕತೆಗಳನ್ನಾಡಿದರು. ಜವಹರಲಾಲ್ ಇಷ್ಟು ಹೊತ್ತಿಗೆ ವಿದೇಶದಿಂದ ಹಿಂತಿರುಗಿ ಬಂದು ಕಮಲಾನನ್ನು ವಿವಾಹವಾಗಿದ್ದರು. ಇವರಂತೂ ಮೊದಲೇ ಗಾಂಧಿಯ ಭಕ್ತರಾಗಿದ್ದರು. ದೇಶದ ಸ್ವಾತಂತ್ರ್ಯಹೋರಾಟಕ್ಕಾಗಿ ತಂದೆ, ಮಗ ಇಬ್ಬರೂ ಗಾಂಧೀಜಿಯನ್ನನುಸರಿಸಲು ಆಸಕ್ತರಾದರು. ಮೋತೀಲಾಲ್‌ರವರು ತಮ್ಮ ವಕೀಲಿ ವೃತ್ತಿಯನ್ನು ನಿಲ್ಲಿಸಿದರು. ಮನೆ ಯಲ್ಲಿದ್ದ ಬೆಲೆಬಾಳುವ ವಸ್ತುಗಳೆಲ್ಲವೂ ಮಾರಾಟವಾಗಲ್ಪಟ್ಟವು.

ಒಂದು ಸಲ ಮೋತೀಲಾಲರ ಹಳೆಯ ಕಕ್ಷಿಗಾರನೊಬ್ಬನು ಅವರು ವಕೀಲಿ ವೃತ್ತಿಯನ್ನು ಬಿಟ್ಟ ಮೇಲೆ ಬಂದು ತನ್ನ ಕೇಸನ್ನು ನಡೆಸಿದರೆ ಒಂದು ಲಕ್ಷ ರೂಪಾಯಿಗಳನ್ನು ಕೊಡುವೆನೆಂದನು.

ಮೋತೀಲಾಲರು, ಮಗಳು ಲಕ್ಷ್ಮಿಯನ್ನು ಕರೆದು "ನಾನು ಈ ಕೇಸನ್ನು ಒಪ್ಪಿಕೊಂಡರೆ ನಿನಗೆ ಸರಿಯೆನ್ನಿಸುವುದೆ?" ಎಂದು ಕೇಳಿದರು.

ಲಕ್ಷ್ಮಿಯು ಸ್ವಲ್ಪ ನಿಧಾನಿಸಿ ಧೈರ್ಯ ತಂದುಕೊಂಡು "ನಾನು ಒಪ್ಪುವುದಿಲ್ಲ" ಎಂದಳು.

ಮೋತೀಲಾಲರು ಮಗಳನ್ನು ಅಪ್ಪಿಕೊಂಡು ಕಕ್ಷಿಗಾರನನ್ನು ಹಿಂದಕ್ಕೆ ಕಳುಹಿಸಿಬಿಟ್ಟರು.

ಸ್ವರೂಪಾಳ ತಂದೆ ಮತ್ತು ಅಣ್ಣಂದಿರಿಬ್ಬರೂ ಸ್ವಾತಂತ್ರ್ಯ ಹೋರಾಟ ದಲ್ಲಿ ಧುಮುಕಿ ಆಗಲೇ ಹಳಬರಾಗಿದ್ದರು. ಅವರ ಮನೆಗೆ ಪೋಲೀಸರೂ ಆಗಮಿಸಲಾರಂಭಿಸಿದ್ದರು. ಮನೆಯಲ್ಲಿದ್ದ ಎಂತಹ ಸಾಮಾನಾದರೂ ದಂಡವೆಂದು ಪರಿಗಣಿಸಿ ತೆಗೆದುಕೊಂಡುಹೋಗಲ್ಪಡುತ್ತಿತ್ತು. ಇಂತಹ

ಅನುಭವಗಳನ್ನು ಪಡೆದ ವಿಜಯಲಕ್ಷ್ಮಿ ಪಂಡಿತ್ ತನ್ನ ಮುಂದಿನ ಬಾಳನ್ನು ಆಗಲೇ ರೂಪಿಸಿಕೊಂಡಿದ್ದಳೋ ಏನೋ !

## ವಿವಾಹ

ವಿಜಯಲಕ್ಷ್ಮಿಯ ವಿವಾಹಕ್ಕೆ ಮಹಾತ್ಮಾಗಾಂಧಿಯವರ ಆಪ್ತ ಕಾರ್ಯದರ್ಶಿಗಳಾದ ಮಹದೇವ ದೇಸಾಯಿಯವರು ಬಹಳ ಮಟ್ಟಿಗೆ ಕಾರಣರು.

ಒಂದು ಸುಪ್ರಭಾತದಲ್ಲಿ ಮಹದೇವ ದೇಸಾಯಿಯವರು ಮೋತೀ ಲಾಲರ ಮನೆಗೆ ಬಂದರು. ವಿಜಯಲಕ್ಷ್ಮಿಯನ್ನು ಹತ್ತಿರ ಕರೆದು "ಮಾಡ್ರನ್ ರೆವ್ಯೂ" ಎಂಬುದರಲ್ಲಿ ಬಂದಿದ್ದ "ಅಟ್ ದಿ ಫೀಟ್ ಆಫ್ ದಿ ಗುರು" ಎಂಬ ಶಿರೋನಾಮೆಯಲ್ಲಿದ್ದ ಲೇಖನವನ್ನು ಓದು ಎಂದು ಹೇಳಿದರು. ಅದನ್ನು ಬರೆದವರು ರಣಜಿತ್ ಪಂಡಿತ್‌ರವರು. ಇವರನ್ನು ಮಹದೇವ ದೇಸಾಯಿಯವರು ಸ್ವರೂಪಾಳ ಎದುರಿಗೆ ತುಂಬಾ ಒಳ್ಳೆಯ ವರೆಂದೂ, ಬಹಳ ಬುದ್ಧಿವಂತರೆಂದೂ, ನೋಡಲು ಸುಂದರವಾಗಿರುವ ರೆಂದೂ ಹೊಗಳಿದರು. ರಣಜಿತ್ ಪಂಡಿತ್‌ರವರು ಕಾಥೇವಾರ್‌ನಿಂದ ಬಂದ ಒಬ್ಬ ಉತ್ತಮ ವಕೀಲರು. ಮಹದೇವ ದೇಸಾಯಿ ಮತ್ತು ರಣಜಿತ್ ಪಂಡಿತರು ಜೊತೆಯಲ್ಲೇ ಓದಿದವರು.

ಒಂದು ದಿವಸ ರಣಜಿತ್ ಪಂಡಿತ್‌ರವರು ವಿಜಯಲಕ್ಷ್ಮಿಯ ಹತ್ತಿರ ಬಂದು "ನೀನು ನನ್ನನ್ನು ಮದುವೆಯಾಗುವೆಯಾ ? ನಾನು ಬಹಳ ದೂರ ದಿಂದ ಬಂದಿದ್ದೇನೆ. ಇದುವರೆಗೂ ನಾನೊಬ್ಬನೇ ಬಾಳಜೀವನದಲ್ಲಿ ಕಷ್ಟ ವೆಂಬ ಸೇತುವೆಯನ್ನು ದಾಟುತ್ತಿದ್ದೆ. ಇನ್ನು ಮೇಲೆ ನಾವಿಬ್ಬರೂ ಒಟ್ಟಿಗೇ ದಾಟೋಣವೆ ?" ಎಂದು ಕೇಳಿದರು.

ಇವರನ್ನೇ ಸ್ವರೂಪಾ ಪಂಡಿತ್ ೧೯೨೧ನೇ ಇಸವಿ ಮೇ ೧೦ನೇ ತಾರೀಖು ಮದುವೆಯಾದಳು. ಮದುವೆಯು ಅತಿ ವಿಜೃಂಭಣೆಯಿಂದ ನಡೆಯಿತು. ಎಲ್ಲಾ ನಿಯಮಗಳೂ ಶಾಸ್ತ್ರೋಕ್ತವಾಗಿ ನಡೆದವು. ಅಖಿಲ

ಭಾರತ ರಾಷ್ಟ್ರೀಯ ಕಾಂಗ್ರೆಸ್ ಸಂಸ್ಥೆಯ ಸದಸ್ಯರೆಲ್ಲರೂ ಮದುವೆಗೆ ಬಂದಿದ್ದರು. ಇದನ್ನು ನೋಡಿ ಅಲಹಾಬಾದಿನಲ್ಲಿದ್ದ ಇಂಗ್ಲಿಷರು ಏನಾದರೂ ಗಲಾಟೆಯಾಗಬಹುದೆಂದು ಹೆದರಿದ್ದರು. ವಿಜಯಲಕ್ಷ್ಮಿಯ ಮದುವೆಯ ದಿನ ಮೇ ೧೦, ಇಂಡಿಯಾದೇಶದ ಸ್ವಾತಂತ್ರ್ಯ ಹೋರಾಟದ ವಾರ್ಷಿಕ ದಿನವೂ ಆಗಿದ್ದಿತು. ಅಂದರೆ ೧೮೫೭ನೇ ಇಸವಿ ಮೇ ೧೦ನೇ ತಾರೀಖೇ ಸ್ವಾತಂತ್ರ್ಯಸಂಗ್ರಾಮ ಶುರುವಾದದ್ದು.

ವಿಜಯಲಕ್ಷ್ಮಿಪಂಡಿತ್ ಮತ್ತು ರಣಜಿತ್ ಪಂಡಿತರ ಬಾಳಬೆಳಕಾಗಿ ಚಂದ್ರಲೇಖಾ, ನಯನತಾರಾ, ಮತ್ತು ರೀತಾ ಹುಟ್ಟಿದರು.

೧೯೨೦ರಲ್ಲೇ ರಾಜಕೀಯ ಹೋರಾಟ ಅತ್ಯುಗ್ರವಾಗಿತ್ತು. ನೆಹರೂ ಮನೆತನದವರ ಶ್ರೀಮಂತಿಕೆಯೆಲ್ಲಾ ಬಹಳಮಟ್ಟಿಗೆ ಕಡಿಮೆಯಾಯಿತು. ನೆಹರೂ ಮನೆತನದವರ ಏಳಿಗೆಯನ್ನೂ ಮತ್ತು ಅದೃಷ್ಟವನ್ನೂ ಒಂದು ನಾಗರಹಾವು ತನ್ನ ಅಧೀನದಲ್ಲಿಟ್ಟುಕೊಂಡಿದ್ದಿತೆಂದು ಆಗ ಪ್ರತೀತಿ ಇತ್ತು. ಈ ಸರ್ಪಕ್ಕೆ ಮನೆಯಲ್ಲೆಲ್ಲಾ ಓಡಾಡಲು ಸ್ವಾತಂತ್ರ್ಯವಿತ್ತಂತೆ. ಯಾರೂ ಈ ಹಾವಿಗೆ ಹೆದರುತ್ತಿರಲಿಲ್ಲವಂತೆ. ಆನಂದಭವನದ ಹಿಂದೆ ಒಂದು ಸಣ್ಣ ಮನೆ ಆದಕ್ಕೋಸ್ಕರವಾಗಿಯೇ ಇತ್ತು. ಭವನದ ತೋಟದಲ್ಲೆಲ್ಲಾ ತನ್ನಿಷ್ಟ ಬಂದಂತೆ ಓಡಾಡುತ್ತಿತ್ತು. ಪ್ರತಿಯೊಬ್ಬರೂ ಅದರ ಸ್ನೇಹವನ್ನು ಹೊಂದಿ ಆನಂದಿಸುತ್ತಿದ್ದರು. ಆ ಸರ್ಪವೂ ಯಾರನ್ನೂ ತೊಂದರೆಪಡಿಸುತ್ತಿರಲಿಲ್ಲವಂತೆ.

ಹೀಗಿರಲು ೧೯೨೦ರಲ್ಲಿ ಒಂದು ದಿನ ಒಬ್ಬ ಹೊಸ ಜವಾನನು ಆ ಹಾವನ್ನು ನೋಡಿ ಹೆದರಿಕೊಂಡು ಅದನ್ನು ಕೊಂದುಬಿಟ್ಟನು. ಅಂದಿನಿಂದಲೇ ನೆಹರೂ ಮನೆತನದವರ ಅಭಿವೃದ್ಧಿಯ ಇಳಿತವು ಪ್ರಾರಂಭವಾಯಿತೆಂದು ಸೇವಕರು ಅನ್ನುತ್ತಿದ್ದರು. ಆ ಹಾವು ಸತ್ತು ಸ್ವಲ್ಪದಿನಗಳಲ್ಲೇ ಮೋತಿಲಾಲ್ ನೆಹ್ರೂರವರು ತಮ್ಮ ವಕೀಲಿ ವೃತ್ತಿಯನ್ನು ಬಿಟ್ಟುಬಿಟ್ಟರು. ಅರಮನೆಯಂತಿದ್ದ ಆನಂದಭವನವು ಸೆರೆಮನೆಯಾಯಿತು. ಜವಹರಲಾಲ್ ಮತ್ತು ಮೋತಿಲಾಲ್ ನೆಹ್ರೂ ಸೆರೆಮನೆಗೆ ಹೋದರು.

ಆದರೆ ನಿಜವಾಗಲೂ ತಮ್ಮ ಐಶ್ವರ್ಯ ಭೋಗವನ್ನು ತ್ಯಜಿಸಿದ್ದು ನೆಹರೂ ಮನೆತನದವರ ಅದೃಷ್ಟವೇ ಆಯಿತು. “ ಮನೆಯಲ್ಲಿದ್ದ ನಾಗರ

ಹಾವನ್ನು ಕೊಂದು ಬ್ರಿಟಿಷರ ದಬ್ಬಾಳಿಕೆಯೆಂಬ ಹಾವನ್ನು ಎದುರಿಸಲು ನೆಹರೂ ಮನೆತನದವರು ಪ್ರಯತ್ನಪಟ್ಟರು ".

ಸ್ವರೂಪಾಳ ಪತಿಯಾದ ರಣಜಿತ್ ಪಂಡಿತ್‌ರವರು ದೊಡ್ಡ ಸಾಹಿತಿಗಳಾಗಿದ್ದರು. ಅವರ ಸಾಹಿತ್ಯದ ಸೊಬಗೇ ಸ್ವರೂಪಾಳನ್ನು ಅವರಕಡೆಗೆ ಆಕರ್ಷಿಸಿತು. ಹೀಗೆ ಸ್ವರೂಪಾ ಮತ್ತು ಅವಳ ಪತಿ ಉತ್ತಮ ಸಂಸ್ಕೃತಿಯಿಂದ ಕೂಡಿದ ಜೀವನವನ್ನು ನಡೆಸುತ್ತಿದ್ದರು. ಸ್ವರೂಪಾಳು ತನ್ನ ಪತಿಯ ಬಗ್ಗೆ ಏನನ್ನು ಹೇಳಬೇಕಾದರೂ ಪುಸ್ತಕಗಳನ್ನುದ್ದೇಶಿಸಿಯೇ ಹೇಳುತ್ತಾಳೆ. ತನ್ನ ಸೆರೆಮನೆಯ ದಿನಚರಿಯಲ್ಲಿ " ನನ್ನ ಪತಿಗೆ ಕೆಲವು ಪುಸ್ತಕಗಳನ್ನು ಕಳುಹಿಸಿದೆ; ಅವರು ಈ ಗೋಡೆಯ ಆ ಕಡೆಯಲ್ಲೇ ಇದ್ದಾರೆ. ಆದರೂ ಎಷ್ಟು ದೂರ! ನನಗೆ ಅವರ ಹತ್ತಿರ ಮಾತನಾಡಬೇಕೆಂದು ಬಹಳ ಆಸೆಯಾಗುತ್ತಿದೆ" ಎಂದು ಬರೆದಿದ್ದಾಳೆ. ಮತ್ತೆ ಮಾರನೇ ದಿನವೇ " ರಣಜಿತ್ ನನಗ್ಗೆ ಕೆಲವು ಪುಸ್ತಕಗಳನ್ನು ಕಳುಹಿಸಿದ್ದಾರೆ. ಅವು ತುಂಬಾ ಚೆನ್ನಾಗಿವೆ " ಎಂದು ಬರೆದಿದಾಳೆ.

ಹೀಗೆ ಪುಸ್ತಕಗಳೇ ಬಹುಮಾನ ರೂಪವಾಗಿ ಒಬ್ಬರಿಂದೊಬ್ಬರಿಗೆ ಕಳುಹಿಸಲ್ಪಡುತ್ತಿದ್ದವು. " ಜ್ಞಾನವೇ ಅವರ ಮೊದಲನೆಯ ಮಗು ". ಹೀಗೆ ಪರಸ್ಪರ ಅರ್ಥಮಾಡಿಕೊಂಡ ದಂಪತಿಗಳು ಇಡೀ ಪ್ರಪಂಚದಲ್ಲೇ ವಿರಳವೆಂದರೆ ಅತಿಶಯೋಕ್ತಿಯೇನಲ್ಲ.

೧೯೨೬ರಲ್ಲಿ ಕಮಲಾ ನೆಹರೂವಿಗೆ ಬಹಳ ಕಾಯಿಲೆಯಾಯಿತು. ಡಾಕ್ಟರುಗಳು ಸ್ವಿಡ್ಜರ್‌ಲೆಂಡಿನ ಯಾವುದಾದರೂ ಸ್ಯಾನಿಟೋರಿಯಂನಲ್ಲಿ ಚಿಕಿತ್ಸೆ ನಡೆಸಬೇಕೆಂದು ಅಭಿಪ್ರಾಯಪಟ್ಟರು. ಅದರಂತೆಯೇ ಜವಹರ್ ತನ್ನ ಪತ್ನಿ, ತಂಗಿ ವಿಜಯಲಕ್ಷ್ಮಿ ಮತ್ತು ರಣಜಿತ್ ಯೂರೋಪ್ ದೇಶವನ್ನೆಲ್ಲಾ ಸುತ್ತಾಡಿ ಅಪಾರ ಅನುಭವವನ್ನು ಹೊಂದಿ ಮತ್ತೆ ಇಂಡಿಯಾಕ್ಕೆ ಹಿಂತಿರುಗಿ ಬಂದರು. ಇದುವರೆಗೂ ವಿಜಯಲಕ್ಷ್ಮಿ ರಾಜಕೀಯ ಜೀವನದಲ್ಲಿ ಸ್ವಂತವಾಗಿ ಪ್ರವೇಶಿಸಿರಲಿಲ್ಲ. ತನ್ನ ಅಣ್ಣ ಮತ್ತು ತಂದೆಯವರು ಭಾಗವಹಿಸುತ್ತಿದ್ದುದನ್ನು ನೋಡುತ್ತಿದ್ದಳು ಅಷ್ಟೆ.

# ರಾಜಕೀಯ ಜೀವನ

೧೯೩೧-೩೨ರಲ್ಲಿ ತನ್ನ ರಕ್ತಸಿಕ್ತವಾದ ದೇಶಪ್ರೇಮವನ್ನು ಹೊರ ಗೆಡಹಲು ಅವಳಿಗೆ ಅವಕಾಶ ಸಿಕ್ಕಿತು.

ಜವಹರ್‌ಲಾಲ್ ಯೂರೋಪಿನಿಂದ ಹಿಂತಿರುಗಿ ಬಂದಮೇಲೆ ಲಾಹೋರಿನಲ್ಲಿ ನಡೆದ ಇಂಡಿಯನ್ ನ್ಯಾಷನಲ್ ಕಾಂಗ್ರೆಸ್‌ನ ಅಧ್ಯಕ್ಷ ರಾದರು. ೧೯೩೦ರ ಜನವರಿ ೨೬, ದೇಶದ ಸ್ವಾತಂತ್ರ್ಯ ದಿನವೆಂದು ಘೋಷಿಸಲ್ಪಟ್ಟಿತು. ಗಾಂಧೀಜಿಯವರ ಉಪ್ಪಿನ ಸತ್ಯಾಗ್ರಹವೂ ಭರದಿಂದ ಸಾಗಿತ್ತು. ಜವಹರ್ ೧೯೩೦ನೇ ಇಸ್ವಿ ಏಪ್ರಿಲ್ ೧೪ರಂದು ದಸ್ತಗಿರಿ ಯಾದರು. ತಂದೆ ಮೋತಿಲಾಲ್‌ನೆಹ್ರೂರವರೇ ಲಾಹೋರ್ ಅಧಿವೇಶನಕ್ಕೆ ಅಧ್ಯಕ್ಷರಾದರು. ಈಗಾಗಲೇ ಮೋತೀಲಾಲರ ಆರೋಗ್ಯ ಬಹಳಮಟ್ಟಿಗೆ ಕುಂದಿತ್ತು. ಆ ಪರಿಸ್ಥಿತಿಯಲ್ಲಿಯೂ ಮೋತೀಲಾಲರು ದೇಹಶ್ರಮವನ್ನು ಲೆಕ್ಕಿಸದೆ ಅಧ್ಯಕ್ಷ ಪದವಿಯ ಭಾರವನ್ನು ಹೊತ್ತರು.

ವಿಜಯಲಕ್ಷ್ಮಿ ಈಗ ಜನತೆಯ ಜೊತೆಗೆ ಸೇರಿಕೊಂಡು ಸ್ವಾತಂತ್ರ್ಯ ಹೋರಾಟದಲ್ಲಿ ನೇರವಾಗಿ ದುಮುಕಿದಳು. ಅಲ್ಲಲ್ಲಿ ಭಾಷಣಗಳನ್ನು ಮಾಡಿ ಜನರಲ್ಲಿ ಸುಪ್ತವಾಗಿದ್ದ ಸ್ವಾತಂತ್ರ್ಯದ ಬಿಸಿ ರಕ್ತವನ್ನು ಕುದಿಯು ವಂತೆ ಮಾಡಿದಳು. ಆಗ ಬ್ರಿಟಿಷ್ ಸರ್ಕಾರದಿಂದ, ಇವಳು ಒಂದು ತಿಂಗಳು ಸ್ವಾತಂತ್ರ್ಯದ ಹೋರಾಟದಲ್ಲಿ ಭಾಗವಹಿಸಬಾರದೆಂದು ಆಜ್ಞೆ ಬಂತು. ಆದರೆ ಈ 'ಸಿಂಹಿಣಿ' ಅದನ್ನು ಲೆಕ್ಕಿಸುವಳೇನು? ೧೯೩೨ರ ಜನವರಿ ೨೭ನೇ ತಾರೀಖು ವಿಜಯಲಕ್ಷ್ಮಿ ಮತ್ತು ಅವಳ ತಂಗಿ ಕೃಷ್ಣಾ ನನ್ನು ರಾಜಕೀಯ ದಂಗೆಯನ್ನೆಬ್ಬಿಸುವರೆಂಬ ಹೆದರಿಕೆಯಿಂದ ದಸ್ತಗಿರಿಮಾಡ ಲಾಯಿತು. ತಾಯಿಯೊಬ್ಬಳನ್ನು ಬಿಟ್ಟು ನೆಹ್ರೂ ಮನೆತನದ ಉಳಿದವ ರೆಲ್ಲರೂ ಸೆರೆಮನೆಯನ್ನು ಸೇರಿದರು. ವಿಜಯಲಕ್ಷ್ಮಿಗೆ ಒಂದುವರ್ಷ ಕಠಿಣ ಶಿಕ್ಷೆಯನ್ನೂ ದಂಡವನ್ನೂ ವಿಧಿಸಿದರು. ಕೃಷ್ಣಾಳಿಗೆ ದಂಡವಿಲ್ಲದೆ ಒಂದು ವರ್ಷದ ಕಠಿಣ ಶಿಕ್ಷೆಯನ್ನು ವಿಧಿಸಲಾಯಿತು. ಆ ವರ್ಷ ವಿಜಯಲಕ್ಷ್ಮಿ ಯನ್ನು ಲಕ್ನೋ ಜೈಲಿನಲ್ಲಿ ಇಡಲಾಗಿತ್ತು. ಆಗ ವಿಜಯಲಕ್ಷ್ಮಿಯ ಕೊನೆಯ ಮಗುವಿಗೆ ಕೇವಲ ೩ ವರ್ಷಕ್ಕಿಂತ ಕಡಿಮೆಯಾಗಿತ್ತು.

ಶಿಕ್ಷೆಯನ್ನು ಮುಗಿಸಿಕೊಂಡು ಸೆರೆಮನೆಯ ವಾಸದಿಂದ ಹೊರಗೆ ಬಂದರೂ ಲಕ್ಷ್ಮಿ ರಾಜಕೀಯ ಮತ್ತು ಸಾಮಾಜಿಕ ಜೀವನವನ್ನು ಬಿಡಲಿಲ್ಲ. ವಿಜಯಲಕ್ಷ್ಮಿ ಅನೇಕ ಬಹಿರಂಗ ಸಭೆಗಳಲ್ಲಿ ಮಾತನಾಡಿ ಭಾಷಣಮಾಡುವ ಕಲೆಯನ್ನು ಚೆನ್ನಾಗಿ ಅಭ್ಯಾಸಮಾಡಿಕೊಂಡಳು. ೧೯೩೫ರಲ್ಲಿ ಅಲಹಾ ಬಾದಿನ ಮುನಿಸಿಪಲ್ ಬೋರ್ಡ್‌ಗೆ ಬಹುಮತದಿಂದ ಚುನಾಯಿತಳಾದಳು. ಅದೇ ಸಮಯದಲ್ಲಿ ವಿದ್ಯಾಭ್ಯಾಸ ಸಮಿತಿಯ ಅಧ್ಯಕ್ಷಳೂ ಆದಳು.

## ತಂದೆಯ ಖಾಯಿಲೆ

ಮೋತೀಲಾಲ್ ನೆಹ್ರೂರವರ ಆರೋಗ್ಯದ ಸ್ಥಿತಿ ೧೯೩೦ರ ಹೊತ್ತಿಗೇ ತೀವ್ರವಾಗಿ ಹದಗೆಡುತ್ತಾ ಬಂದಿತ್ತು. ಜವಹರಲಾಲ್‌ರವರು ಮತ್ತೆ ಮತ್ತೆ ಸೆರೆಮನೆಗೆ ಹೋಗುವುದು, ತಮ್ಮ ಸೊಸೆ ಕಮಲಾ ಮತ್ತು ಹೆಣ್ಣುಮಕ್ಕಳು ಮಳೆ ಬಿಸಿಲೆನ್ನದ ಸ್ವಾತಂತ್ರ್ಯ ಹೋರಾಟದಲ್ಲಿ ಧುಮುಕಿದ್ದುದು ಅವರ ಮನಸ್ಸಿನ ಮೇಲೆ ಪರಿಣಾಮಮಾಡಿತು.

ತಮ್ಮ ಆರೋಗ್ಯವನ್ನು ಲಕ್ಷಿಸದೆ ಮೋತೀಲಾಲರು ದುಡಿಯುತ್ತಿದ್ದರು. ವಿಜಯಲಕ್ಷ್ಮಿಯು ತಂದೆಯನ್ನು ವಿಶ್ರಾಂತಿ ತೆಗೆದುಕೊಳ್ಳಿರೆಂದು ಬೇಡಿ ಕೊಳ್ಳುತಿದ್ದಳು. ಜವಹರರು ತನ್ನ ತಂದೆಗೆ ಹೊರದೇಶಕ್ಕೆ ಹೋಗಿ ಕೆಲವು ದಿನ ಆರಾಮವಾಗಿರಬೇಕೆಂದು ಸೂಚಿಸಿದರು. ಮೋತೀಲಾಲರು ಒಪ್ಪಿ ಕೊಂಡು ಕಲ್ಕತ್ತಾಗೆ ಪ್ರಯಾಣ ಬೆಳೆಸಿದರು. ಅವರ ಜೊತೆಯಲ್ಲಿ ಒಬ್ಬ ವೈದ್ಯನೂ ಹೋದನು. ಅವರ ಆರೋಗ್ಯಸ್ಥಿತಿ ಕಲ್ಕತ್ತಾಗೆ ಬರುವಹೊತ್ತಿಗೆ ತೀರ ಕೆಟ್ಟಿತು. ಮುಂದೆ ಪ್ರಯಾಣಮಾಡಲು ಸಾಧ್ಯವಾಗಲಿಲ್ಲ. ಏಳು ವಾರಗಳು ಕಲ್ಕತ್ತಾದಲ್ಲಿ ಕಳೆದವು.

೧೯೩೧ರ ಜನವರಿ ಒಂದನೇ ತಾರೀಖು ಮೋತೀಲಾಲರ ಸೊಸೆ, ಜವಹರರ ಪತ್ನಿ ಕಮಲಾಳ ಬಂಧನವಾಯಿತು. ಕಲ್ಕತ್ತಾದಲ್ಲಿದ್ದ ಮೋತೀಲಾಲ್ ನೆಹ್ರೂರವರಿಗೆ ಇದನ್ನು ಕೇಳಿ ಅತೀವ ದುಃಖವಾಯಿತು,

ಅಲಹಾಬಾದಿಗೆ ಹಿಂತಿರುಗಬೇಕೆಂದುಕೊಂಡು, ವಿಜಯಲಕ್ಷ್ಮಿ ಮತ್ತು ರಣಜಿತ್ ಪಂಡಿತರೊಡನೆ ಅಲಹಾಬಾದಿಗೆ ಮರಳಿದರು.

ಜವಹರ್ ಈ ಹೊತ್ತಿನಲ್ಲಿ ನೈನಿ ಜೈಲಿನಲ್ಲಿದ್ದರು. ಮೋತಿಲಾಲರು ಅಲ್ಲಿಗೆ ಹೋಗಿ ಮಗನನ್ನು ಭೇಟಿಮಾಡಿದರು. ಜವಹರರ ಜಂಘಾಬಲವೇ ಉಡುಗಿಹೋಯಿತು. ಆ ದಷ್ಟಪುಷ್ಟ ಶರೀರದ ಮೋತೀಲಾಲರೆಲ್ಲಿ? ಈ ಸುಕ್ಕುಗಟ್ಟಿದ ಮುಖದ ಸೊರಗಿದ ದೇಹದ ತಂದೆಯೆಲ್ಲಿ? ಎನ್ನಿಸಿತು. ತನ್ನ ತಂದೆ ತನ್ನ ಕೈಬಿಟ್ಟು ಹೊರಟುಹೋಗುವರೇನೊ? ಎಂದು ಮನಸ್ಸಿನಲ್ಲಿಯೇ ಭಯವುಂಟಾಯಿತು.

ಕೆಲವು ದಿನಗಳಲ್ಲಿ ಕೃಷ್ಣಾಳ ಬಂಧನವೂ ಆಯಿತು. ಯುವಕ ಸಂಘದ ಸದಸ್ಯರ ವಿಚಾರಣೆಗೆ, ಕೃಷ್ಣಾ ಕಾರ್ಯದರ್ಶಿಯಾಗಿದ್ದುದರಿಂದ ಅವಳು ಹೋಗಲೇಬೇಕಾಗಿತ್ತು. ಕೋರ್ಟಿನ ಹೊರಭಾಗದ ಮೆಟ್ಟಿಲುಗಳನ್ನು ಇಳಿಯುತ್ತಿದ್ದಾಗ ದಸ್ತಗಿರಿ ವಾರಂಟನ್ನು ಅವಳ ಮುಂದೆ ಹಿಡಿಯಲಾಯಿತು. ಕೃಷ್ಣಾ ಬೆದರಿದರೂ ಮುಂದೇನು ಮಾಡುವಹಾಗಿರಲಿಲ್ಲ. ತನ್ನ ತಂದೆಯ ಆರೋಗ್ಯವನ್ನು ನೆನಸಿಕೊಂಡು ಕೃಷ್ಣಾ ಬಹಳ ದುಃಖಪಟ್ಟಿದ್ದಳು. ಮೋತೀಲಾಲರು ಯಾವಾಗಲೂ ಕೃಷ್ಣಾ ಈಗಾಗಲೇ ಜೈಲಿಗೆ ಹೋಗುವುದಿಲ್ಲವೆಂದು ಭರವಸೆಯನ್ನಿಟ್ಟುಕೊಂಡಿದ್ದರು. ಮಗ, ಸೊಸೆ, ಮಕ್ಕಳು ಇವರ ಬಂಧನದಿಂದುಂಟಾದ ಪೆಟ್ಟಿನಿಂದ ಎಚ್ಚರಗೊಳ್ಳಲಾಗಲಿಲ್ಲ. ಆದರೆ ಅಂದಿನ ರಾತ್ರಿಯೇ ಕೃಷ್ಣಾಳ ಬಿಡುಗಡೆಯಾಯಿತು. ಯಾರೋ ತಿಳಿಯದ ಸ್ನೇಹಿತರು ಕೃಷ್ಣಾಳ ಇಷ್ಟವಿಲ್ಲದೇ ದಂಡವನ್ನು ತೆತ್ತು ಬಿಡುಗಡೆ ಮಾಡಿಸಿದ್ದರು.

೧೯೩೧ರ ಜನವರಿ ೨೬ರ ಮಧ್ಯಾಹ್ನ ಜವಹರ್ ಮತ್ತು ರಣಜಿತ್‌ರಿಗೆ ಮೋತಿಲಾಲರ ಸ್ಥಿತಿ ವಿಷಮಿಸಿದೆಯೆಂದು ಜೈಲಿನಿಂದ ಬಿಡುಗಡೆಯಾಯಿತು.

ವಿಜಯಲಕ್ಷ್ಮಿಯು ಅತೀವ ಆಸಕ್ತಿಯಿಂದ ತಂದೆಯನ್ನು ನೋಡಿಕೊಳ್ಳುತ್ತಿದ್ದಳು. ಗಾಂಧೀಜಿಯೂ ಸೆರೆಮನೆಯಿಂದ ಬಿಡುಗಡೆ ಹೊಂದಿ ಅದೇ ದಿನವೇ ಬೊಂಬಾಯಿನಿಂದ ಅಲಹಾಬಾದಿಗೆ ಪ್ರಯಾಣಮಾಡಿದರು. ಗಾಂಧೀಜಿಯನ್ನು ನೋಡಿ ಮೋತೀಲಾಲರಿಗೆ ತುಂಬಾ ಸಂತೋಷವಾಯ್ತು. ಕೇವಲ ಎರಡು ದಿನಗಳಾದ ಮೇಲೆ ಮತ್ತೆ ರಣಜಿತ್‌ರ ಬಂಧನವಾಯಿತು.

ಮೋತೀಲಾಲರನ್ನು ನೋಡಲು ಅನೇಕ ಜನ ಇಂಡಿಯಾ ದೇಶದ ಬೇರೆ ಬೇರೆ ಭಾಗಗಳಿಂದ ಜನಗಳು ಬಂದು ಹೋಗುತ್ತಿದ್ದರು. ಮೋತಿಲಾಲರು ಮನಸ್ಸಿನಲ್ಲಿ, ಇಷ್ಟು ಜನ ಬಂದು ತಮ್ಮನ್ನ, ನೋಡಬಹುದಾಗಿರುವಾಗ ತಮ್ಮ ಸ್ವಂತ ಅಳಿಯನೇ ದೂರವಾಗಿರುವನಲ್ಲಾ, ಎಂದು ವ್ಯಸನಪಡುತ್ತಿದ್ದರು. ವೈದ್ಯರುಗಳು ಇದನ್ನು ಮನಸ್ಸಿಗೆ ಎಷ್ಟೂ ಹಚ್ಚಿಕೊಳ್ಳಬಾರದೆಂದು ಹೇಳಿದರೂ ಕೇಳಲಿಲ್ಲ. ಮತ್ತೆ ಡಾಕ್ಟರುಗಳ ಒತ್ತಾಯದಿಂದ ಮೂರು ನಾಲ್ಕು ದಿನದ ಮೇಲೆ ರಣಜಿತ್‌ರವರ ಬಿಡುಗಡೆಯಾಯಿತು.

ಮೋತೀಲಾಲರು ಗಾಂಧೀಜಿಯವರಿಗೆ, “ನಾನು ಹೊರಟುಹೋಗುತ್ತಿದ್ದೇನೆ ಮಹಾತ್ಮಾಜೀ, ಸ್ವರಾಜ್ಯವನ್ನು ನೋಡಲು ಇರುವುದಿಲ್ಲ. ನಿಜ, ಆದರೆ ನೀವು ಈಗಾಗಲೇ ಗದ್ದಿದ್ದೀರಿ. ನೀವು ಸ್ವರಾಜ್ಯವನ್ನು ಹೊಂದೇ ಹೊಂದುವಿರಿ” ಎಂದರು.

ವೈದ್ಯರ ಅಭಿಪ್ರಾಯದಂತೆ ಎಕ್ಸರೇಗೋಸ್ಕರ ಮೋತೀಲಾಲರನ್ನು ಲಕ್ನೋಗೆ ಕರೆದುಕೊಂಡು ಹೋಗಲಾಯಿತು. ಆದರೆ ಮಾರನೆಯ ದಿನದ ಸಾಯಂಕಾಲವೇ ಅವರ ಪ್ರಜ್ಞೆ ತಪ್ಪಿತು. ಹತ್ತಿರವಿದ್ದ ಕೃಷ್ಣಾನನ್ನು ಕುರಿತು “ನನ್ನ ಮಗಳು, ನೀನು ಯಾವಾಗಲೂ ಶೌರ್ಯದಿಂದಿರಬೇಕು” ಎಂದು ಹೇಳಿ ಕೊನೆಯ ಮುತ್ತನ್ನು ಕೊಟ್ಟು ಜ್ಞಾನತಪ್ಪಿ ಬಿದ್ದರು. ಅವರ ಇಷ್ಟದಂತೆಯೇ ಅವರ ಹೆಣ್ಣು ಮಕ್ಕಳಿಬ್ಬರೂ ನಡೆದುಕೊಂಡರು, ನಡೆದುಕೊಳ್ಳುತ್ತಿದ್ದಾರೆ. ಬೆಳಗಿನ ಜಾವದ ಹೊತ್ತಿಗೆ, ಕೃಷ್ಣ, ವಿಜಯಲಕ್ಷ್ಮಿ, ಕಮಲ ಎಲ್ಲರಿಗೂ ಸಿದ್ಧೆ ಬಂತು. ಜವಹರ್‌ರವರು ಮತ್ತು ಅವರ ತಾಯಿ ಮಾತ್ರ ಮೋತೀಲಾಲರು ಕೊನೆಯುಸಿರು ಬಿಡುವುದನ್ನು ನೋಡಿದರು. ಭಾರತದ ಶ್ರೇಷ್ಠ ರಾಜಕಾರಿಣಿ, ಸುಪ್ರಸಿದ್ಧ ವಕೀಲರು, ಅಪ್ರತಿಮ ದೇಶಾಭಿಮಾನಿ, ಜವಹರರನ್ನು ಭಾರತಕ್ಕೆ ಕೊಟ್ಟ ಮೋತೀಲಾಲರು ಲಕ್ಷಾಂತರ ಭಾರತೀಯರನ್ನು ಕಣ್ಣೀರಿನಲ್ಲಿ ಮುಳುಗಿಸಿ ಪರಲೋಕವಾಸಿಗಳಾದರು. ಮೋತೀಲಾಲರ ನಿಧನದಿಂದ ನೆಹ್ರೂ ಮನೆತನದ ಒಂದು ‘ಸ್ತಂಭ’ವೇ ಉರುಳಿ ಹೋದಂತಾಯಿತು. ಜವಹರ್ ಮತ್ತು ವಿಜಯಲಕ್ಷ್ಮಿಗೆ ಭವಿಷ್ಯದ ಬಗ್ಗೆ ಭಯವುಂಟಾದರೂ ಸ್ವಾತಂತ್ರ್ಯದ ಬಿಸಿ ರಕ್ತದಲ್ಲೇ ನೆನೆದು ಹೋದ ಅವರ ದೇಹಗಳು ಮತ್ತೆ ಗಟ್ಟಿಮನಸ್ಸುಮಾಡಿಕೊಂಡು ಇನ್ನೂ ಹೆಚ್ಚು ಹೆಚ್ಚಾಗಿ

ದೇಶಸೇವೆಮಾಡಲು ಪಣತೊಟ್ಟರು. ತಂದೆ ಮೋತೀಲಾಲರು ಹಾಕಿಕೊಟ್ಟ ದಾರಿಯಲ್ಲೇ ಹೋಗಬೇಕೆಂದು ನಿರ್ಧರಿಸಿದಳು ವಿಜಯಲಕ್ಷ್ಮಿ. ಆ ದಾರಿ ಯಾವುದು ? **ಸ್ವಾರ್ಥತ್ಯಾಗ, ದೇಶಪ್ರೇಮ** ಮತ್ತು **ಜನಸೇವೆ.**

## ಭಾರತದ ಪ್ರಥಮ ಮಹಿಳಾಮಂತ್ರಿ

ಕಾಂಗ್ರೆಸ್ ಸಂಸ್ಥೆಯು ಇಷ್ಟು ಹೊತ್ತಿಗಾಗಲೇ ಬಹಳ ಪ್ರಾಮುಖ್ಯತೆಯನ್ನು ಹೊಂದಿತ್ತು. ಸಾರ್ವತ್ರಿಕ ಚುನಾವಣೆಗಳಲ್ಲಿ ಭಾಗವಹಿಸಲು ಕಾಂಗ್ರೆಸ್ಸಿನ ಸದಸ್ಯರು ಮನಸ್ಸು ಮಾಡಿದ್ದರು.

೧೯೩೭ರಲ್ಲಿ ಉತ್ತರ ಪ್ರದೇಶದಲ್ಲಿ ನಡೆದ ಸಾರ್ವತ್ರಿಕ ಚುನಾವಣೆಯಲ್ಲಿ ಕಾಂಗ್ರೆಸ್ಸಿನ ಹುರಿಯಾಳುಗಳಲ್ಲೊಬ್ಬರಾಗಿ ವಿಜಯಲಕ್ಷ್ಮಿ ಸ್ಪರ್ಧಿಸಿದಳು. ಕಾಂಗ್ರೆಸ್ಸಿಗೆ ಜನತೆಯ ಬೆಂಬಲ ಅಪಾರವಾಗಿತ್ತು. ಕಾಂಗ್ರೆಸ್ಸಿನ ಹೆಸರು ಕೇಳಿಯೇ ತಮ್ಮ ಮತಗಳನ್ನು ಕೊಡಲು ಮುಂದೆ ಬಂದರು. ವಿಜಯಲಕ್ಷ್ಮಿಗೆ ಎದುರಾಗಿ ಸ್ಪರ್ಧಿಸಿದವರು ಶ್ರೀಮತಿ ಶ್ರೀವತ್ಸವ. ಇವರು ಆಗಿನ ಕೇಂದ್ರ ಸರ್ಕಾರದ ವಿದ್ಯಾಮಂತ್ರಿಗಳಾಗಿದ್ದವರ ಪತ್ನಿಯವರು. ಇವರಿಗೆ ಬ್ರಿಟಿಷ್ ಸರ್ಕಾರದ ಬೆಂಬಲವಿತ್ತು. ಆದರೆ ವಿಜಯಲಕ್ಷ್ಮಿಗೆ ಜನತೆಯ ಬೆಂಬಲವಿತ್ತು. ಜನತೆಯಲ್ಲಿ ದೇಶಪ್ರೇಮದ ರಕ್ತ ಹರಿಯುತಿತ್ತು. ಎಲ್ಲೆಲ್ಲೂ ಕಾಂಗ್ರೆಸ್ಸಿಗೆ ಜಯವುಂಟಾಗುತ್ತಿತ್ತು.

ತನಗೆ ಮತ ದೊರಕಿಸಿಕೊಳ್ಳಲು ವಿಜಯಲಕ್ಷ್ಮಿಯು ತನ್ನ ಮತದಾರ ಕ್ಷೇತ್ರದಲ್ಲಿ ಪ್ರಯಾಣ ಮಾಡಬೇಕಾಗಿತ್ತು. ಆ ಪ್ರಯಾಣದಲ್ಲಿ ವಿಜಯಲಕ್ಷ್ಮಿಗೆ ಹೊಸ ಅನುಭವಗಳುಂಟಾದುವು. ತನ್ನ ಜೊತೆಯವರೊಡನೆ ರೈಲಿನಲ್ಲಿ, ಮೋಟಾರು ಗಾಡಿಯಲ್ಲಿ, ಎತ್ತಿನಗಾಡಿಯಲ್ಲಿ, ಕಾಲುನಡಿಗೆಯಲ್ಲಿ ಕಾನ್ಪುರದ ಹಳ್ಳಿಗಳನ್ನೆಲ್ಲಾ ಸುತ್ತಾಡಿದಳು. ಬಡತನದಲ್ಲಿ ಬೇಯುತ್ತಿದ್ದ ಸಾವಿರಗಟ್ಟಲೆ ಜನಗಳ ಸಂಪರ್ಕವಾಯಿತು. ಅವಳು ಏನೂ ಕಷ್ಟಪಡದಿದ್ದರೂ ಅವಳಿಗೆ ವಿಜಯಲಭಿಸುತ್ತಿತ್ತು. ಮತದಾರರೆಲ್ಲರೂ ಕಾಂಗ್ರೆಸ್ಸಿಗೇ

ಸಹಾಯಮಾಡಿದರು. ವಿಜಯಲಕ್ಷ್ಮಿಯು ಒಂದು ಸಾವಿರ ಹೆಚ್ಚು ಓಟು ಗಳನ್ನು ಗಳಿಸಿ ವಿಧಾನ ಸಭೆಗೆ ಸದಸ್ಯಳಾದಳು. ವಿಜಯಲಕ್ಷ್ಮಿಯ ರಾಜಕೀಯ ಜೀವನದಲ್ಲಿ ಇದು ಮೊದಲನೆಯ ಹಂತ

ಚುನಾವಣೆಯ ಬಿಸಿ ಕಡಿಮೆಯಾಯಿತು. ಒಂದುದಿನ ಸುಪ್ರಭಾತ ದಲ್ಲಿ ವಿಜಯಲಕ್ಷ್ಮಿಗೆ ಈಗ ಭಾರತದ ಗೃಹ ಮಂತ್ರಿಗಳಾಗಿರುವ ಮತ್ತು ಉತ್ತರ ಪ್ರದೇಶದಲ್ಲಿ ಆಗಿನ ಮುಖ್ಯಮಂತ್ರಿಗಳಾಗಿದ್ದ ಪಂಡಿತ ಗೋವಿಂದ ವಲ್ಲಭಪಂತರಿಂದ ತಂತಿಯೊಂದು ಬಂತು. ಅದರಲ್ಲಿ ವಿಜಯಲಕ್ಷ್ಮಿಗೆ ತಮ್ಮ ಮಂತ್ರಿಮಂಡಲದಲ್ಲಿ ಸೇರಲು ಆಹ್ವಾನವನ್ನಿತ್ತಿದ್ದರು. ವಿಜಯಲಕ್ಷ್ಮಿಯು ತನ್ನ ಒಪ್ಪಿಗೆಯನ್ನಿತ್ತು ಭಾರತದ ಕೀರ್ತಿಯನ್ನು ಬೆಳಗಿದಳು. ಭಾರತದ ಪ್ರಥಮ ಮಹಿಳಾಮಂತ್ರಿಯಾಗಿ ಶೋಭಿಸಿದಳು ವಿಜಯಲಕ್ಷ್ಮಿ. ಉತ್ತರ ಪ್ರದೇಶದಲ್ಲಿ ವಿಜಯಲಕ್ಷ್ಮಿಯು ಆರೋಗ್ಯ ಮಂತ್ರಿಯಾಗಿ ತನ್ನ ಕರ್ತವ್ಯ ಚ್ಯುತಿಗೆಡೆಗೊಡದಂತೆ ಕಾರ್ಯವನ್ನು ನಿರ್ವಹಿಸುತ್ತಿದ್ದಳು. "ಉತ್ತರ ಪ್ರದೇಶದ ಆರೋಗ್ಯವನ್ನು ಚೊಕ್ಕಟವಾದ ಮತ್ತು ಮಾದರಿಯಾದ ಆನಂದ ಭವನದ ನಿವಾಸಕ್ಕಿಂತ ಹೆಚ್ಚಾಗಿ ಮತ್ತಾರು ಅಷ್ಟು ಚೆನ್ನಾಗಿ ಕಾಯು ತ್ತಿದ್ದರು!"

೧೯೩೭ರ ಜುಲೈ ೨೯ನೇ ಗುರುವಾರದಂದು ವಿಜಯಲಕ್ಷ್ಮಿಯು ಭಾರತದ ಪ್ರಥಮ ಮಹಿಳಾ ಮಂತ್ರಿಯಾಗಿ ಪ್ರಮಾಣವಚನ ತೆಗೆದು ಕೊಂಡರು. ವಿಧಾನ ಸಭೆಗೆ ತನ್ನ ತಂದೆಯು ಹೋಗುತ್ತಿದ್ದಾಗ ಪ್ರೇಕ್ಷಕರ ಜಾಗದಲ್ಲಿ ಕುಳಿತು, ಸಭೆಯ ಕಾರ್ಯಕಲಾಪಗಳನ್ನು ಆಸಕ್ತಿಯಿಂದ ವೀಕ್ಷಿಸುತ್ತಿದ್ದಳು. ಈಗ, ತಾನೇ ಸಭೆಯಲ್ಲಿ ಕುಳಿತು ಪ್ರತ್ಯಕ್ಷವಾಗಿ ಸಭೆಯ ಕಾರ್ಯಕಲಾಪಗಳಲ್ಲಿ ಭಾಗವಹಿಸಬೇಕಾಯಿತು.

ಒಂದುಸಲ ಮುಖ್ಯ ಮಂತ್ರಿಗಳಿಗೆ ದೇಹಾಲಸ್ಯವುಂಟಾಗಿ ಸಭೆಗೆ ಬರಲಾಗಲಿಲ್ಲ. ಅಂದೇ ಒಂದು ಮುಖ್ಯ ನಿರ್ಣಯವನ್ನು ಸಭೆಯಲ್ಲಿ ಚರ್ಚಿಸಬೇಕಾಗಿತ್ತು. ಅವರಿಗೆ ಬದಲಾಗಿ ವಿಜಯಲಕ್ಷ್ಮಿಯು ಅಕಸ್ಮಿಕ ವಾಗಿ ಮಾತನಾಡಬೇಕಾಯಿತು. ಅವಳಿಗೆ ಕೆಲವು ನಿಮಿಷಗಳು ನಡುಕ ವುಂಟಾದರೂ ಅದನ್ನು ತೋರಿಸಿಕೊಳ್ಳದೆ ಭಾಷಣಮಾಡಲು ಮೊದಲು

ಮಾಡಿದಳು. ಭಾಷಣವು ಅಡಚಣೆಯಿಲ್ಲದೆ ಮುಂದುವರಿಯಿತು. ತನ್ನ ಶಕ್ತಿಗೆ ತಾನೇ ಆಶ್ಚರ್ಯಪಟ್ಟುಕೊಂಡಳು.

ಮಂತ್ರಿಯಾದ ಮೇಲೆ ತನಗುಂಟಾದ ಆಶ್ಚರ್ಯಾನುಭವಗಳನ್ನು ಬಹಳ ಮುದ್ದಾಗಿ ತಾನೇ ಈರೀತಿ ವಿವರಿಸಿದ್ದಾಳೆ. "ನಾನು ಮೊದಲನೆಯ ದಿನ ನನ್ನ ಆಫೀಸ್‌ರೂಮನ್ನು ಹೊಕ್ಕಾಗ, ನನಗೆ ಕೆಲಸವೇನು ಮಾಡ ಬೇಕೆಂಬುದೇ ತಿಳಿಯಲಿಲ್ಲ. ಒಬ್ಬ ತರುಣ ಅಧಿಕಾರಿ ನನ್ನ ಮುಂದೆ ಬಂದು ನಿಂತು ನನ್ನ ಆಪ್ತ ಕಾರ್ಯದರ್ಶಿಯೆಂದು ಹೇಳಿಕೊಂಡ. ಹಾಗೆಂದರೇನೆಂದು ಆಶ್ಚರ್ಯಪಟ್ಟುಕೊಂಡು ಮುಂದೆ ವಿಷಯವನ್ನು ವಿವರವಾಗಿ ತಿಳಿಯೋಣ ವೆಂದು ಸುಮ್ಮನಾದೆ. ನನ್ನ ಗಮನ, ಮುಂದೆ ನನ್ನ ಮುಖ್ಯವಾದ ಕಾಲ ವನ್ನೆಲ್ಲಾ ಕಳೆಯಬೇಕಾದ ಕೊಠಡಿಯ ಕಡೆ ಹೋಯಿತು. ಅಲ್ಲಿ ಒಂದು ದೊಡ್ಡ ಬರೆಯುವ ಮೇಜು ಮತ್ತು ಒಂದು ದೊಡ್ಡ ಚರ್ಮದ ಸೋಫಾ ಇದ್ದುವು. ಮಿಕ್ಕ ಸ್ಥಳದಲ್ಲಿ ಅನೇಕ ಕುರ್ಚಿಗಳು, ಸಣ್ಣ ಮೇಜುಗಳು ಮತ್ತು ಪುಸ್ತಕಗಳನ್ನಿಡುವ ಬೀರುಗಳು ಇದ್ದುವು. ಇವೆಲ್ಲವನ್ನೂ ನೋಡಿದರೆ ಹಳೆಯ ಕುರ್ಚಿ, ಮೇಜುಗಳನ್ನು ಮಾರುವ ಅಂಗಡಿಯಂತೆ ಕಾಣುತ್ತಿತ್ತು. ಎಲ್ಲದರ ಮೇಲೂ ಬಹಳ ಧೂಳು ತುಂಬಿತ್ತು. ನಾನು ಬಾಗಿಲಲ್ಲಿ ನಿಂತು ಕೋಣೆಯೊಳಕ್ಕೆ ದೃಷ್ಟಿ ಬೀರಿದೆ. ತಕ್ಷಣ ಆತುರದಿಂದ ನಾನು ನನ್ನ ಕಾರ್ಯದರ್ಶಿಯನ್ನು ಕುರಿತು ಕುರ್ಚಿ ಮೇಜುಗಳಲ್ಲಿ ಕೆಲವನ್ನು ತೆಗೆಸ ಬಹುದೇ ಎಂದು ಕೇಳಿದೆ. ನಾನು ಧೈರ್ಯವನ್ನು ತಂದುಕೊಂಡು ಆಜ್ಞೆ ಗಳನ್ನು ಮಾಡಲು ಮೊದಲು ಮಾಡಿದೆ.

ಮಧ್ಯದಲ್ಲಿ ಹಾಸಿದ್ದ ಕಡುಗೆಂಪು ಜಮಖಾನೆಯನ್ನು ತೆಗೆಸಿ ಹಸುರು ಸೇರಿದ ನೀಲಿ ಬಣ್ಣದ ಜಮಖಾನೆಯನ್ನು, ಆ ಕೊಠಡಿಯನ್ನು ನೋಡಿ ಕೊಳ್ಳುವವನನ್ನು ಹೊಗಳಿ ಹಾಕಿಸಿದ್ದಾಯಿತು. ಬರೆಯುವ ಮೇಜು ಮತ್ತು ಸೋಫಾಗಳನ್ನು ನನ್ನಿಷ್ಟಬಂದಂತೆ ಬದಲಾಯಿಸಿದೆ. ಉಪ ಯೋಗಿಸದ ಕುರ್ಚಿಗಳನ್ನು ತೆಗೆಯಲಾಯಿತು. ನಮ್ಮ ಮನೆಯಿಂದ ಕಿಟಕಿಗೆ, ಬಾಗಿಲಿಗೆ ಹಾಕುವ ಪರದೆಗಳನ್ನು ತರಿಸಿ ಹಾಕಿದೆ. ಹೀಗೆ ಕೊಠಡಿಯು ಸ್ವಲ್ಪ ಸುಧಾರಿಸಿತು. ಈಗ ನಾನು ಸ್ವಲ್ಪ ಹೊತ್ತಾದರೂ ಕಳೆಯಬಹುದೆಂದುಕೊಂಡೆ. ಇನ್ನೇನೂ ಇಲ್ಲದಂತಿತ್ತು ಹ್ಹಾ! ಅದು ಹೂವು

ಗಳು. ಒಂದು ಹೂವಿಡುವ ಪಾತ್ರೆಯನ್ನು ಅದೇ ದಾರಿಯಲ್ಲಿದ್ದ ಒಂದು ಅಂಗಡಿಯಿಂದ ತಂದು ನಮ್ಮ ಆಫೀಸಿನ ಮುಂದಿನ ತೋಟದಲ್ಲಿದ್ದ ಗುಲಾಬಿ ಹೂವುಗಳನ್ನು ಕಿತ್ತು ಆ ಪಾತ್ರೆಯಲ್ಲಿಡಲು ಹೇಳಿದೆ. ನನ್ನ ಹೇಳಿಕೆಗೆ ನಿರುತ್ತರ. ಕೊಠಡಿಯನ್ನು ನೋಡಿಕೊಳ್ಳುವವನು ಧೈರ್ಯವನ್ನು ತಂದುಕೊಂಡು, "ಮೇಡಮ್, ಹೂವುಗಳನ್ನು ಇಲ್ಲಿಡಲು ಸಾಧ್ಯವಿಲ್ಲ. ಇದಕ್ಕೆ ಮುಂಚೆ ಯಾರೂ ಇಲ್ಲಿ ಹೂವುಗಳನ್ನ ಇಡುತ್ತಿರಲಿಲ್ಲ" ಎಂದನು. ನಾನು ಆಶ್ಚರ್ಯದಿಂದ, "ಹೌದೇನು ? ಹಾಗಾದರೆ ಈಗ ಯಾರಾದರೂ ಹೂವಿಡಲು ಪ್ರಾರಂಭಮಾಡಬೇಕು. ನಾನೇ ತೋಟಕ್ಕೆ ಹೋಗಿ ಕೆಲವು ಹೂವುಗಳನ್ನು ತರುತ್ತೇನೆ" ಎಂದು ಕತ್ತರಿ ಹಿಡಿದುಕೊಂಡು ಹೊರಟೆ. ತಕ್ಷಣ ಆ ಮನುಷ್ಯನು ತಾನೇ ಗುಲಾಬಿ ಹೂಗಳನ್ನು ತರುತ್ತೇನೆಂದು ಹೋದನು. ಅಂದಿನಿಂದ ನನ್ನ ಕೊಠಡಿಯಲ್ಲಿ ಹೂವುಗಳನ್ನು ಇಡುವ ಅಭ್ಯಾಸ ಮುಂದುವರೆದಿದೆ.

ನನ್ನ ಗಮನವನ್ನು ಮೇಜಿನ ಮೇಲಿದ್ದ ಕಾಗದ ಪತ್ರಗಳು ಸೆಳೆದವು. ಅದರ ಉಪಯೋಗವನ್ನು ಹೇಗೆ ಮಾಡುವುದೆನ್ನುವುದೇ ತಿಳಿಯದಾಯಿತು. ಯಾರೂ ನನಗೆ ಅದನ್ನು ಹೇಳಿಕೊಡುವಹಾಗಿರಲಿಲ್ಲ. ನಾನೇ ಮಾಡ ಬೇಕಾಗಿತ್ತು. ಯಾವುದೋ ನನಗಿಷ್ಟಬಂದ ಒಂದು ಕಾಗದಗಳ ಕಟ್ಟನ್ನು ತೆಗೆದು ಮೊದಲಿನಿಂದ ಕೊನೆಯವರೆಗೂ ಓದಲು ಮೊದಲುಮಾಡಿದೆ. ಆಸಕ್ತಿ ಹುಟ್ಟಿಸುವಂಥ ಕೆಲವು ವಿಷಯಗಳು ಅದರಲ್ಲಿದ್ದುವು. ಅದನ್ನು ಓದಿ ಮುಗಿಸಿಯಾದ ಮೇಲೆ ನಾನು ಆಜ್ಞೆಯನ್ನು ಕೊಡಬಲ್ಲೆ ಎನ್ನುವಷ್ಟು ಧೈರ್ಯವುಂಟಾಯಿತು. ಹೀಗೆ ಒಂದಾದಮೇಲೊಂದು ತೆಗೆದುಕೊಂಡು ಎಲ್ಲಾ ಕಾಗದಗಳ ಕಟ್ಟನ್ನು ಓದಿ ಮುಗಿಸಿದೆ. ಇಷ್ಟುಹೊತ್ತಿಗೆ ಕಾಗದ ಗಳನ್ನು ಓದುವ ರೀತಿಯೂ ಅರ್ಥಮಾಡಿಕೊಳ್ಳುವ ತಿಳಿವಳಿಕೆಯೂ ಬಂದಿತು.

ನನ್ನ ಶಾಖೆಯ ಕಾರ್ಯದರ್ಶಿ ನನ್ನ ಮುಂದೆ ಬಂದು ನಿಂತಾಗ ನನ್ನ ಉಸಿರೇ ಆಡದಂತಾಯಿತು. ಅವನು ಅಷ್ಟು ಉದ್ದವಾಗಿದ್ದ. ನನಗೆ ಯಾವಾಗಲೂ ಉದ್ದಕ್ಕಿರುವವರ ಜೊತೆಯಲ್ಲಿ ನಿಂತುಕೊಂಡರೆ ಬಹಳ ನಾಚಿಕೆಯಾಗುತ್ತಿತ್ತು. ಅವನ ಜೊತೆಯಲ್ಲಿ ಕೈ ಕುಲುಕಲು ನಿಂತಾಗ

ನಾನು ಮತ್ತಷ್ಟು ಕುಳ್ಳಿಯಾಗಿ ಕಾಣುತ್ತಿದ್ದೆ. ಇಂತಹವನಿಗೆ ನಾನು ಆಜ್ಞೆಯನ್ನು ಕೊಡಬೇಕೆ? ದೇವರೇ! ಎಂದುಕೊಂಡೆ....ಕೆಲವು ದಿನಗಳಲ್ಲಿ ಅವನ ಜೊತೆಯಲ್ಲೂ ಮತ್ತು ಪಾರ್ಲಿಮೆಂಟರಿ ಕಾರ್ಯದರ್ಶಿಯ ಜೊತೆಯಲ್ಲೂ ಸಮಾಲೋಚನೆಯಿಂದ ನಡೆದುಕೊಳ್ಳಲು ಸಾಧ್ಯವಾಯಿತು" ಎಂದು ಬರೆದಿದ್ದಾರೆ.

ವಿಜಯಲಕ್ಷ್ಮಿ ಪಂಡಿತರು ಮೊದಮೊದಲು 'ಕೆಲಸದ ಅಭ್ಯಾಸವಿಲ್ಲದಿದ್ದರೂ ಒರುಬರುತ್ತಾ ತಮ್ಮ ಮಂತ್ರಿ ಪದವಿಯನ್ನು ತುಂಬಾ ಶ್ರೇಷ್ಠ ರೀತಿಯಲ್ಲಿ ತೂಗಿಸಿಕೊಂಡು ಹೋದರು. "ತೊಟ್ಟಿಲನ್ನು ತೂಗುವ ಕೈ ರಾಜ್ಯವನ್ನೂ ಆಳಬಲ್ಲದು" ಎಂಬುದನ್ನು ತೋರಿಸಿಕೊಟ್ಟರು.

## ತಾಯಿಯ ಮರಣ

೧೯೩೮ರ ಒಂದು ಸಾಯಂಕಾಲ ಆನಂದ ಭವನದಲ್ಲಿ ಮೋತೀಲಾಲರ ಮೂರು ಜನ ಮಕ್ಕಳೂ ಆಕಸ್ಮಿಕವಾಗಿ ಸೇರಿದರು. ತಾಯಿಯ ಆರೋಗ್ಯ ಮೊದಲಿಗಿಂತ, ಕೆಲವು ದಿನಗಳಿಂದ ಉತ್ತಮವಾಗಿತ್ತು. ವಿಜಯಲಕ್ಷ್ಮಿಯ ಪತಿಯೂ ಅವಳ ಮಕ್ಕಳೂ ಅಲ್ಲಿದ್ದರು.

ನೆಹರೂ ಮನೆಯವರೆಲ್ಲರೂ ಊಟವಾದನಂತರ ಬಹಳಹೊತ್ತಿನ ರಾತ್ರಿಯ ವರೆಗೂ ಮಾತನಾಡುತ್ತಾ ಕುಳಿತಿದ್ದರು. ತಾಯಿಯು ದಿನಕ್ಕಿಂತ ಹೆಚ್ಚಾಗಿ ಮಾತನಾಡುತ್ತಿದ್ದರು. ಅದೇ ರಾತ್ರಿಯೇ ವಿಜಯಲಕ್ಷ್ಮಿಯು ಲಕ್ನೋಗೆ ಹೋಗಬೇಕಾಗಿತ್ತು. ವಿಜಯಲಕ್ಷ್ಮಿಯು ಆನಂದಭವನವನ್ನು ಬಿಡುವವರೆಗೂ ಎಚ್ಚರದಿಂದಿರಬೇಕೆಂದು ತಾಯಿಯು ಇನ್ನೂ ಮಲಗಿರಲಿಲ್ಲ. ಲಕ್ಷ್ಮಿಯನ್ನು ಅಂದು ಹೋಗಬೇಡವೆಂದು ಎಲ್ಲರೂ ಕೇಳಿಕೊಂಡರೂ ಅವಳು ನಿಲ್ಲಲು ಸಿದ್ಧಳಿರಲಿಲ್ಲ.

ಹನ್ನೊಂದು ಗಂಟೆಗೆ ಹೊರಡಲು ಸಿದ್ಧವಾಗಿ ಲಕ್ಷ್ಮಿಯು ತಾಯಿಗೆ ಹೇಳಿಬಿಟ್ಟು ಹೋಗೋಣವೆಂದು ತಾಯಿಯ ಮುಂದೆ ಬಂದು ನಿಂತಳು.

ತಾಯಿಯು ನಿಂತುಕೊಂಡು ಲಕ್ಷ್ಮಿಯನ್ನು ಅಪ್ಪಿಕೊಳ್ಳಲು ಪ್ರಯತ್ನಪಟ್ಟು ಉರುಳಿಬಿದ್ದರು. ಕೆಳಗೆ ಬೀಳುವುದರೊಳಗಾಗಿ ಜವಹರ್ ಮತ್ತು ಕೃಷ್ಣಾ ಲಕ್ಷ್ಮಿಯ ಸಹಾಯಕ್ಕೆ ಬಂದು ತಾಯಿಯನ್ನು ಹಿಡಿದುಕೊಂಡರು. ಹಾಸಿಗೆಯ ಮೇಲೆ ಮಲಗಿಸುವುದರೊಳಗಾಗಿ ಮಾತೆಗೆ ಜ್ಞಾನವೇ ತಪ್ಪಿ ಹೋಯಿತು. ಇದಕ್ಕೆ ಮುಂಚೆಯೇ ಅವರಿಗೆ ಎರಡುಸಲ ಪಾರ್ಶ್ವವಾಯು ಬಂದಿತ್ತು. ಇದು ಮೂರನೆಯ ಸಲ. ವೈದ್ಯರು ಬಂದು ನೋಡಿದರೂ ಏನೂ ಮಾಡಲಾಗಲಿಲ್ಲ. ಬೆಳಗಿನ ಐದು ಗಂಟೆಯ ಹೊತ್ತಿಗೆ ತನ್ನ ಮುದ್ದು ಮಕ್ಕಳನ್ನು ಆನಂದಭವನದಲ್ಲೇ ಬಿಟ್ಟು ಮೋತೀಲಾಲರ ಪತ್ನಿ ತಮ್ಮ ಪತಿಯನ್ನು ಹಿಂಬಾಲಿಸಿದರು.

ಮೋತೀಲಾಲರ ಪತ್ನಿಯ ಸಹೋದರಿ ಬೀಬಿ ಅಮ್ಮನವರೂ ಈ ಸಮಯದಲ್ಲಿ ಆನಂದಭವನದಲ್ಲಿದ್ದರು. ಅವರಿಗೆ ತನ್ನ ತಂಗಿಯ ನಿಧನದಿಂದ ಅತೀವ ದುಃಖವಾಯಿತು. ಮಕ್ಕಳ ದುಃಖವನ್ನು ಸ್ವಲ್ಪಮಟ್ಟಿಗೆ ಶಮನಮಾಡಿ ತನ್ನ ದುಃಖವನ್ನು ತಡೆದುಕೊಂಡು ತಂಗಿಯ ಸ್ಮಶಾನ ಯಾತ್ರೆಗೆ ಎಲ್ಲಾ ಏರ್ಪಾಡುಗಳನ್ನೂ ಮಾಡಿದರು. ಮಕ್ಕಳನ್ನು ಅತ್ತ ಕಡೆಗೆ ಕಳಿಸಿ ತಾವು ಮನೆಯ ಹೊರಭಾಗದಲ್ಲಿ ನಿಂತುಕೊಂಡು ಹೂವುಗಳಿಂದಲಂಕೃತವಾದ ಮನೆಯ ಮುಂಭಾಗವನ್ನು ನೋಡುತ್ತಾ ಬಹಳ ಹೊತ್ತು ನಿಂತರು. ಅನಂತರ ಒಳಗೆ ಬಂದು ತನ್ನ ತಂಗಿಯು ಯಾವ ಹಾಸಿಗೆಯಲ್ಲಿ ಮಲಗಿದ್ದಳೋ ಅಲ್ಲಿಯೇ ಬಂದು ಮಲಗಿದರು. ಜವಹರ್ ಮತ್ತು ಲಕ್ಷ್ಮಿ ತಮ್ಮ ತಾಯಿಯ ಅಂತ್ಯಕ್ರಿಯೆಯನ್ನು ಮುಗಿಸಿಕೊಂಡು ಹಿಂತಿರುಗಿ ಬಂದಾಗ ತಮ್ಮ ತಾಯಿಯಂತೆಯೇ ಪಾರ್ಶ್ವವಾಯುವಿನಿಂದ ನರಳುತ್ತಿದ್ದ ದೊಡ್ಡಮ್ಮನನ್ನು ನೋಡಿದರು. ಇದಕ್ಕೆ ಮುಂಚೆ ಅವರಿಗೆ ಯಾವ ಖಾಯಿಲೆಯೂ ಇರಲಿಲ್ಲ. ಮತ್ತೊಂದು ರಾತ್ರಿ ಕಳೆದು ಬೆಳಿಗ್ಗೆ ಐದು ಗಂಟೆಗೆ ಸರಿಯಾಗಿ ಬೀಬಿ ಅಮ್ಮನವರು ಕಣ್ಣುಮುಚ್ಚಿದರು. ಇದು ವಿಜಯಲಕ್ಷ್ಮಿಯ ಜೀವನದಲ್ಲಿ ಒಂದು ದೊಡ್ಡ ಪರಿಣಾಮವನ್ನುಂಟು ಮಾಡಿತು. ತಾಯಿ ಮತ್ತು ದೊಡ್ಡಮ್ಮನನ್ನು ಕೇವಲ ೨೪ ಗಂಟೆಗಳಲ್ಲಿ ಕಳೆದುಕೊಂಡ ವಿಜಯಲಕ್ಷ್ಮಿಗೆ ತುಂಬಾ ದುಃಖವಾದುದರಲ್ಲಿ ಆಶ್ಚರ್ಯವೇನೂ ಇಲ್ಲ.

## ರಾಜೀನಾಮೆ

೧೯೩೯ರಲ್ಲಿ ಎರಡನೆಯ ಮಹಾಯುದ್ಧದ ಹೊತ್ತಿಗೆ ಲಕ್ಷ್ಮಿಯು ತನ್ನ ಕೆಲಸಕ್ಕೆ ರಾಜೀನಾಮೆ ಕೊಡಬೇಕಾಗಿ ಬಂತು. ಬ್ರಿಟಿಷ್ ಸರ್ಕಾರವು, ಭಾರತವೂ ಸಹ ಯುದ್ಧದಲ್ಲಿ ಭಾಗಿಯಾಗಬೇಕೆಂದು ತನ್ನ ಪ್ರತಿಷ್ಠೆಯನ್ನು ತೋರಿಸಿಕೊಳ್ಳಹತ್ತಿತ್ತು. ಉತ್ತರಪ್ರದೇಶದ ಮುಖ್ಯಮಂತ್ರಿಗಳಾಗಿದ್ದ ಜಿ. ಬಿ. ಪಂಡಿತ್‌ರವರು ಇಂಡಿಯಾದ ಒಪ್ಪಿಗೆಯಿಲ್ಲದೆ ಯುದ್ಧಕ್ಕೆ ಭಾರತವನ್ನು ಸೇರಿಸಿಕೊಳ್ಳಲಾಗದೆಂದು ಒಂದು ಹೇಳಿಕೆಯನ್ನಿತ್ತರು. ಇದಕ್ಕೆ ವಿಜಯ ಲಕ್ಷ್ಮಿಯೂ ಒಪ್ಪಿಗೆಯನ್ನಿತ್ತಳು. ಈ ಕಾರಣದಿಂದ ಎಲ್ಲಾ ಕಾಂಗ್ರೆಸ್ ಮಂತ್ರಿಗಳೊಡನೆ ವಿಜಯಲಕ್ಷ್ಮಿಯೂ ರಾಜೀನಾಮೆಯನ್ನು ಕೊಡಬೇಕಾಗಿ ಬಂತು.

ಮಹಾತ್ಮಾ ಗಾಂಧಿಯವರು ವೈಯಕ್ತಿಕ ಸತ್ಯಾಗ್ರಹ ಸಮರವನ್ನು ಪ್ರಾರಂಭಮಾಡಿದರು. ಕೇವಲ ಕೆಲವು ಆರಿಸಿದಂಥಾ ಸತ್ಯಾಗ್ರಹಿಗಳು ಅದರಲ್ಲಿ ಭಾಗವಹಿಸಬೇಕೆಂದು ತೀರ್ಮಾನಿಸಿದ್ದರು. ವಿಜಯಲಕ್ಷ್ಮಿಯೂ ಆ ವ್ಯಕ್ತಿಗಳಲ್ಲೊಬ್ಬಳಾಗಿದ್ದಳು. ಸತ್ಯಾಗ್ರಹಿಯಾಗಿ ಸೇರಿ ತನ್ನ ಸೇವೆಯನ್ನು ಸಲ್ಲಿಸಿದಳು. ೧೯೪೦ರಲ್ಲಿ ಸತ್ಯಾಗ್ರಹದಲ್ಲಿ ಭಾಗವಹಿಸಿದಳೆಂದು ಅವಳನ್ನು ಬಂಧಿಸಿ ೪ ತಿಂಗಳ ಸಾಧಾರಣ ಶಿಕ್ಷೆಯನ್ನು ಕೊಟ್ಟರು. ನೈನಿ ಸೆಂಟ್ರಲ್ ಜೈಲಿನಲ್ಲಿ ತನ್ನ ನಾಲ್ಕು ತಿಂಗಳ ಸಜವನ್ನು ಅನುಭವಿಸಿದಳು. ಸೆರೆಮನೆ ಯಿಂದ ಹೊರಗೆ ಬರುವ ಹೊತ್ತಿಗೆ ಭಾರತೀಯ ಜನರಲ್ಲಿ ಅತೀವ ಬದಲಾ ವಣೆಯುಂಟಾಗಿತ್ತು. ಸ್ವಾತಂತ್ರ್ಯದ ಹೋರಾಟವು ಅತ್ಯುಗ್ರವಾಗಿತ್ತು. ಕಾಂಗ್ರೆಸ್ಸಿನ ಮುಂದಾಳುಗಳ ದೇಶಪ್ರೇಮದ ಪ್ರತಿಯೊಂದು ಕರೆಗೂ ಗಮನವಿತ್ತು ದೇಶದ ಜನರು ಕಾಂಗ್ರೆಸ್ಸನ್ನು ಹಿಂಬಾಲಿಸುತ್ತಿದ್ದರು. ವಿಜಯ ಲಕ್ಷ್ಮಿಯೂ ಕಾಂಗ್ರೆಸ್ಸನ್ನು ಹಿಂಬಾಲಿಸಿದಳು.

## ೧೯೪೨ರ ಆಗಸ್ಟ್ ಚಳುವಳಿಯಲ್ಲಿ

೧೯೪೨ರ ಆಗಸ್ಟ್ ತಿಂಗಳಲ್ಲಿ ಮಹಾತ್ಮಾ ಗಾಂಧಿಯವರು ಚಲೇ ಜಾವ್ ಚಳುವಳಿಯನ್ನು ಪ್ರಾರಂಭಮಾಡಿದರು. ವಿಜಯಲಕ್ಷ್ಮಿಯು

ಈ ಚಳುವಳಿಯಲ್ಲಿ ಸೇರಿ ಬಹಳವಾಗಿ ಸ್ವಾತಂತ್ರ್ಯಸಮರದಲ್ಲಿ ಹೋರಾಟ ಹೂಡಿದಳು. ಹಗಲು ರಾತ್ರಿಯೆನ್ನದೆ ದುಡಿದು ಅಂದಿನ ರಾಜಕೀಯ ಜೀವನದಲ್ಲಿ ಉನ್ನತಮಟ್ಟವನ್ನೇರಿದ್ದಳು. ಜನಗಳು ಬ್ರಿಟಿಷರ ಸರ್ಕಾರ ದಿಂದ ತಾವು ಸ್ವತಂತ್ರರಾಗಬೇಕೆಂದು ತಮ್ಮ ಕೈಲಾದಷ್ಟು ಪ್ರಯತ್ನ ಪಡುತ್ತಿದ್ದರು. ತಮ್ಮ ರೋಷದಲ್ಲಿ ಟೆಲಿಫೋನ್ ತಂತಿಗಳನ್ನು ಕತ್ತರಿಸಿ ಹಾಕಿದರು, ರೈಲುಗಾಡಿಗಳ ಕಂಬಿಗಳನ್ನು ಮುರಿದರು. ಕೆಲವು ಆಫೀಸು ಗಳಿಗೆ ಬೆಂಕಿಯಿಟ್ಟರು. ವಿಜಯಲಕ್ಷ್ಮಿಯು ಉದ್ರಿಕ್ತಗೊಂಡಿದ್ದ ಜನ ಗಳನ್ನು ಸಮಾಧಾನಗೊಳಿಸಲು ಪ್ರಯತ್ನಿಸಿದಳು; ಜನಗಳ ಮನಸ್ಸು ಬ್ರಿಟಿಷ್ ಸರ್ಕಾರದ ಮೇಲೆ ಪ್ರತೀಕಾರದಿಂದ ತುಂಬಿತ್ತು. ವಿಜಯಲಕ್ಷ್ಮಿಗೆ ಅವರನ್ನು ಎದುರಿಸಲು ಸಾಧ್ಯವಾಗಲಿಲ್ಲ. ಸರ್ಕಾರವೂ ದೇಶದಲ್ಲಿ ಶಾಂತಿ ಯನ್ನುಂಟುಮಾಡುವ ಬದಲು ಲಾಠಿಛಾರ್ಜಿಗೂ ಗುಂಡಿನ ಹೊಡೆತಕ್ಕೂ ಪೋಲೀಸರಿಗೆ ಆಜ್ಞೆಯನ್ನಿತ್ತಿತು. ವಿಜಯಲಕ್ಷ್ಮಿಯು ಗುಂಡಿನ ಮಧ್ಯೆ ನುಗ್ಗಿ ಗಾಯಗೊಂಡವರನ್ನು ಆಸ್ಪತ್ರೆಗೆ ಸಾಗಿಸುತ್ತಿದ್ದಳು.

೧೯೪೨ರ ಆಗಸ್ಟ್ ೧೨ರ ಮಧ್ಯರಾತ್ರಿ ಎರಡು ಗಂಟೆಯ ಹೊತ್ತಿಗೆ ವಿಜಯಲಕ್ಷ್ಮಿಯನ್ನು ದಸ್ತಗಿರಿ ಮಾಡಲು ಒಂದು ಪೋಲೀಸ್ ಸೈನ್ಯವೇ ಮನೆಯ ಮುಂದೆ ಬಂದು ನಿಂತಿತು. ಅವಳ ಮನಸ್ಸು ಆಗ ಸಮಾಧಾನ ದಿಂದಿರಲಿಲ್ಲ. ಹಿಂದಿನ ದಿನದಲ್ಲಿ ತಾನೆ ಆಸ್ಪತ್ರೆಗೆ ಸಾಗಿಸಿದ್ದ ಗಾಯ ಗೊಂಡವರ ನೋವಿನಿಂದ ಕೂಡಿದ ಮುಖಗಳು ಅವಳ ಮುಂದೆ ಬಂದು ನಿಲ್ಲುತ್ತಿದ್ದುವು. ಅವಳ ಮಕ್ಕಳೂ ಎದ್ದರು. ಸೆರೆಮನೆಗೆ ಹೋಗಲು ಅವಳ ಬಟ್ಟೆಗಳನ್ನು ಸರಿಮಾಡಲು ತೊಡಗಿದರು. ತಾಯಿಗೆ ಧೈರ್ಯದಿಂದ "ನೀನು ಸೆರೆಮನೆಯಲ್ಲಿದ್ದರೂ ನಾವು ಹೊರಗಡೆಯೇ ಇದ್ದು ಬ್ರಿಟಿಷರನ್ನು ಎದುರಿಸುತ್ತೇವೆ" ಎಂದರು. ವಿಜಯಲಕ್ಷ್ಮಿಯ ಮನೆಯ ಮುಂದೆ ಅನೇಕ ಪೋಲೀಸ್ ಲಾರಿಗಳು ನಿಂತಿದ್ದುವು. ಅವುಗಳಲ್ಲೊಂದು ಅವಳನ್ನು ಕೂಡಿಸಿಕೊಂಡು ಅರ್ಧಗಂಟೆಯೊಳಗಾಗಿ ನೈನಿ ಜೈಲ್ ತಲುಪಿ ಅವಳಿಗೆ ಚಿರಪರಿಚಿತವಾಗಿದ್ದ ಕೊಠಡಿಯಲ್ಲೇ ಅವಳನ್ನಿಡಲಾಯಿತು.

ಒಂಭತ್ತು ತಿಂಗಳ ನಂತರ ಅವಳ ಆರೋಗ್ಯವು ಕೆಟ್ಟಿದ್ದರಿಂದ ಜೈಲಿ ನಿಂದ ಬಿಡುಗಡೆಯಾಯಿತು. ಆದರೆ ಅದು ಕೇವಲ ಹದಿನೈನು ದಿನಗಳು

ಮಾತ್ರ. ಈ ಒಂಭತ್ತು ತಿಂಗಳು ಜೈಲುವಾಸದಿಂದ ವಿಜಯಲಕ್ಷ್ಮಿಯು ಬಹಳ ಕುಗ್ಗಿಹೋಗಿದ್ದಳು. ಆದರೇನು ? ದೇಹದಲ್ಲಿ ಕುಂದಿದ್ದರೂ ಅವಳ ದೇಶಪ್ರೇಮ ಮತ್ತಷ್ಟೂ ಹೆಚ್ಚಿತ್ತು.

ಹದಿನೈದು ದಿನಗಳ ನಂತರ ಸೆರೆಮನೆಗೆ ಹಿಂತಿರುಗಿದಳು. ಅವಳ ಆರೋಗ್ಯವು ಇನ್ನೂ ಸುಧಾರಿಸಿರಲಿಲ್ಲವಾದುದರಿಂದ ಮತ್ತೆ ಅವಳ ಬಿಡುಗಡೆಯಾಯಿತು. ಆಗಲೂ ವಿಜಯಲಕ್ಷ್ಮಿ ತನ್ನ ಆರೋಗ್ಯದ ಕಡೆ ಗಮನ ಕೊಡಲೇ ಇಲ್ಲ.

## ಇಂದಿರಾ ಮದುವೆ

ಈ ಮಧ್ಯದಲ್ಲಿ ನೆಹ್ರೂ ಮನೆತನದಲ್ಲಿ ಒಂದು ಸಂತೋಷ ಸಮಾರಂಭವಾಯಿತು. ಅದು ಜವಹರ್‌ರ ಮಗಳಾದ ಇಂದಿರಾಳ ಮದುವೆ. ಇವಳ ವಿವಾಹವು ಫಿರೋಜ್‌ಗಾಂಧಿಯವರೊಡನೆ ಗೊತ್ತಾಗಿತ್ತು. ಇವರು ನೆಹ್ರೂ ಮನೆತನದವರಿಗೆ ಸ್ನೇಹಿತರಾಗಿದ್ದರು. ವಿಜಯಲಕ್ಷ್ಮಿ ಮತ್ತು ಕೃಷ್ಣಾರ ಸ್ಥಾನವನ್ನು ಈಗ ಆನಂದ ಭವನದಲ್ಲಿ ಇಂದಿರಾ ಹೊಂದಿದ್ದಳು. ವಿಜಯಲಕ್ಷ್ಮಿಯ ಮದುವೆಯಷ್ಟೇ ಇಂದಿರಾಳ ಮದುವೆಯು ಸಂಭ್ರಮವಾಗಿ ನೆರವೇರಿತು. ಮೋತಿಲಾಲರ ಮಕ್ಕಳಿಗೆ ಹೊರಗಿನ ರಾಜಕೀಯಜೀವನವು ಸ್ವಲ್ಪ ಮರೆತಂತಾಗಿ ಮೂರು ಜನರಲ್ಲೂ ಮನೆಯ ವಾತಾವರಣ ಬಹಳ ಸುಖವನ್ನಿತ್ತಿತ್ತು. ಆದರೆ ಅದು ಕೇವಲ ಒಂದೆರಡು ದಿನಗಳು ಮಾತ್ರ. ಮತ್ತೆ ಅವರು ತಾಯ್ನಾಡ ಕರೆಗೆ ಓಗೊಡಲೇ ಬೇಕಾಗಿತ್ತು.

ಈ ಆನಂದಾನುಭವವು ಬಹಳ ದಿವಸ ವಿಜಯಲಕ್ಷ್ಮಿಗೆ ಇರಲಾಗಲಿಲ್ಲ. ಆಗಸ್ಟ್ ೧೨ರಂದು ಅವಳು ಸೆರೆಮನೆಗೆ ಹೋದ ನಂತರ ಕೇವಲ ಮೂರು ದಿನಗಳಮೇಲೆ ಅವಳ ಸ್ವಾತಂತ್ರ್ಯ ಹೋರಾಟದಲ್ಲಿ ಆಪ್ತರಾಗಿದ್ದ ಮಹದೇವ ದೇಸಾಯಿರವರ ನಿಧನದ ವಾರ್ತೆ ಕೇಳಿ ಬಂದಿತು. ಜೀವನದಲ್ಲಿ ಕಹಿ ಸಿಹಿ ಎರಡೂ ಅನುಭವಿಸಬೇಕಷ್ಟೆ !

೧೯೪೨ರ ಮೊದಲಿಗೆ ಚೈನಾದ ಮೇಡಮ್ ಚಿಯಾಂಗ್-ಕೈ-ಷೇಕ್ ರವರು ಇಂಡಿಯಾಕ್ಕೆ ಆಗಮಿಸಿದ್ದರು. ವಿಜಯಲಕ್ಷ್ಮಿಯು ಅಖಿಲಭಾರತ ಮಹಿಳಾಸಮ್ಮೇಳನದ ಪರವಾಗಿ ಅವರಿಗೆ ಒಂದು ಸ್ವಾಗತ ಸಮಾರಂಭ ವನ್ನೇರ್ಪಡಿಸಿದ್ದಳು. ಸ್ವಾಗತ ಭಾಷಣವನ್ನು ವಿಜಯಲಕ್ಷ್ಮಿಯೇ ಮಾಡಿದಳು. ಇದಕ್ಕೆ ಸರಿಯಾದ ಉತ್ತರವನ್ನು ತಮ್ಮ ಭಾಷಣದಲ್ಲಿ ಮೇಡಮ್ ಚಿಯಾಂಗ್-ಕೈ-ಷೇಕ್‌ರವರು ಕೊಟ್ಟರು. ಭಾರತದ ಮಹಿಳೆಯರನ್ನು ಬಹಳವಾಗಿ ಹೊಗಳಿ ಚೈನಾದ ಹೆಂಗಸರಷ್ಟೇ ಭಾರತದ ಮಹಿಳೆಯರೂ ಸ್ವಾತಂತ್ರ್ಯಕ್ಕಾಗಿ ಹೋರಾಟ ನಡೆಸಬೇಕೆಂದೂ, ಎರಡು ದೇಶಗಳ ಸ್ಥಿತಿಯೂ ಒಂದೇ ಎಂದು ವಿವರಿಸಿದರು.

ಮೋತೀಲಾಲರಿಗೆ ವಿಜಯಲಕ್ಷ್ಮಿ ತಕ್ಕ ಮಗಳಾಗಿದ್ದಂತೆ, ಅವಳ ಮಕ್ಕಳೂ, ಲಕ್ಷ್ಮಿಗೆ ತಕ್ಕವಳಾಗಿದ್ದರು. ಸೆರೆಮನೆಗೆ ತಾಯಿಯನ್ನು ಕೊಂಡೊಯ್ಯುವಾಗ ಧೈರ್ಯದಿಂದ ತಾಯಿಗೆ ಸಮಾಧಾನ ಹೇಳಿ ಅವಳ ಕೆಲಸ ನಾವು ಮಾಡುತ್ತೇವೆಂದು ಆಶ್ವಾಸನೆ ಕೊಡುತ್ತಿದ್ದರು. ಹಿರಿಯ ಮಗಳಾದ ಚಂದ್ರಲೇಖಾಳು ಆಗಸ್ಟ್ ೨೦ನೆಯ ತಾರೀಖು ಸೆರೆಮನೆಯನ್ನು ಸೇರಿದಳು.

ಇದಾದ ಕೆಲವು ದಿನಗಳಲ್ಲೇ ಇಂದಿರಾಗಾಂಧಿಯೂ ಅವಳ ಪತಿಯಾದ ಫಿರೋಜ್ ಗಾಂಧಿಯೂ ಇವರ ಜೊತೆಗೂಡಿದರು. ರಣಜಿತ್ ಪಂಡಿತ ರವರು ವಿಜಯಲಕ್ಷ್ಮಿಯ ಬಂಧನವಾದ ಒಂದು ತಿಂಗಳ ನಂತರ ಸೆರೆಮನೆ ಯನ್ನು ಸೇರಿದರು. ಹೀಗಾಗಿ ನೆಹರೂ ಮನೆತನವೆಲ್ಲಾ ಸೆರೆಮನೆಯಲ್ಲಿಯೇ ಇತ್ತು.

ವಿಜಯಲಕ್ಷ್ಮಿಯು ಸೆರೆಮನೆಯಲ್ಲಿದ್ದಾಗಲೇ ಲೇಖಾ ಮತ್ತು ತಾರಾ ಇಬ್ಬರನ್ನೂ ಮುಂದಿನ ವಿದ್ಯಾಭ್ಯಾಸಕ್ಕಾಗಿ ಅಮೇರಿಕಾಗೆ ಕಳುಹಿಸಿದಳು. ಸ್ವತಂತ್ರವಾದ ದೇಶದಲ್ಲಿ ವಿದ್ಯಾಭ್ಯಾಸವನ್ನು ತನ್ನ ಮಕ್ಕಳು ಹೊಂದ ಬೇಕೆಂಬ ಆಸೆಯಿಂದ ತನಗೆ ಅವರನ್ನಗಲಿರಲು ಬಹಳ ಕಷ್ಟವಾದರೂ ಅವರ ಭವಿಷ್ಯ ಜೀವನವನ್ನು ಉತ್ತಮವಾಗಿ ರೂಪಿಸುವುದಕ್ಕೋಸ್ಕರ ಅವರನ್ನು ಕಳುಹಿಸಿದಳು.

# ಅನಧಿಕೃತ ರಾಯಭಾರಿಯಾಗಿ ಅಮೇರಿಕಾಕ್ಕೆ

ಬ್ರಿಟಿಷ್ ಸರ್ಕಾರವು ಇಂಡಿಯಾವನ್ನು ತನ್ನ ಅಧೀನದಲ್ಲಿಟ್ಟು ಕೊಳ್ಳಲು ಅಸಾಧ್ಯ ಸಾಮರ್ಥ್ಯದಿಂದ ಪ್ರಯತ್ನಮಾಡುತ್ತಿತ್ತು. ಅಮೇರಿಕದ ಜನರನ್ನು ಇಂಡಿಯಾಕ್ಕೆ ದುಡ್ಡು ಕೊಟ್ಟು ಕಳುಹಿಸಿ ಇಂಡಿಯಾದ ಅವ ಹೇಳನವನ್ನು ಮಾಡಿಸುತ್ತಿತ್ತು. ಅಮೇರಿಕದ ಜನತೆಯನ್ನು ಬ್ರಿಟಿಷ್ ಸರ್ವಾಧಿಕಾರಕ್ಕೆ ಒಪ್ಪಿಸಲು, ಇಂಡಿಯಾದಲ್ಲಿ ಸ್ವಾತಂತ್ರ್ಯಸಮರವು ಉಗ್ರ ವಾದಷ್ಟೂ, ಹೆಚ್ಚು ಹೆಚ್ಚು ಪ್ರಯತ್ನವು ನಡೆಸಲ್ಪಟ್ಟಿತು. ಆದರೆ ಸತ್ಯಕ್ಕೇ ಜಯ ಎಂಬುದಕ್ಕೆ ಮಿಥ್ಯವುಂಟೇ ? ಅಮೇರಿಕದ ಜನತೆಯು ಭಾರತದ ಭಾರತದ ಪರಿಸ್ಥಿತಿಯನ್ನು ಅರ್ಥಮಾಡಿಕೊಂಡಿದ್ದಿತು. ತಾವು ಹಿಂದೆ ಸ್ವಾತಂತ್ರ್ಯಕ್ಕೆ ಹೋರಾಡಿದಂತೆಯೇ ಭಾರತವೂ ಹೋರಾಡುತ್ತದೆಯೆಂದು ಅವಳಿಗೆ ತಿಳಿದಿತ್ತು. " ಬ್ರಿಟಿಷರು ನಮ್ಮನ್ನು ಮೂರ್ಖರನ್ನಾಗಿ ಮಾಡ ಲಾರರು " ಎಂದು ಪ್ರತಿಯೊಬ್ಬ ಸಾಮಾನ್ಯ ಅಮೇರಿಕನ್ ನಾಗರಿಕನ ಮಾತಾಗಿತ್ತು.

ಇಂತಹ ಪರಿಸ್ಥಿತಿಯಲ್ಲಿ ವಿಜಯಲಕ್ಷ್ಮಿಯು ೧೯೪೪ರಲ್ಲಿ ಅಮೇರಿಕದ ಜನತೆಯ ಸಂಪರ್ಕವನ್ನು ಹೊಂದಿ ಅಲ್ಲಿ ಭಾರತದ ವಿರುದ್ಧ ಅಪಪ್ರಚಾರ ವನ್ನು ತಡೆಗಟ್ಟಲು ಮತ್ತು ತನ್ನ ಮಕ್ಕಳನ್ನು ನೋಡಲು ಅಮೇರಿಕಕ್ಕೆ ತೆರಳಿದಳು. ಇಂಡಿಯಾವನ್ನು ಕುರಿತು ನಿಜಾಂಶವನ್ನು ತಿಳಿಸಬೇಕೆಂದೂ ಅವಳಿಗೆ ಉತ್ಕಟಾಕಾಂಕ್ಷೆಯಿದ್ದಿತು. ಇಂಡಿಯಾ ದೇಶವು ಹಾವಾಡಿಗ ರಿಂದಲೂ, ಭವಿಷ್ಯ ಹೇಳುವವರಿಂದಲೂ ಕೇವಲ ರಾಜಮಹಾರಾಜರು ಗಳಿಂದಲೂ ತುಂಬಿದೆಯೆಂದು ಬ್ರಿಟಿಷರ ಅಪಪ್ರಚಾರದಿಂದ ಅಮೇರಿಕನ್ನರು ನಂಬಿದ್ದರು.

ಬ್ರಿಟಿಷರ ಅಪಪ್ರಚಾರದ ಕೆಲವು ಮುಖ್ಯಾಂಶಗಳು ಹೀಗಿದ್ದುವು : " ಇಂಡಿಯಾ ತನ್ನಲ್ಲೇ ಭಾಗವಾಗಿ ಒಳಜಗಳಗಳಿಂದ ಕೂಡಿದೆ. ಬಹಳ ಜನ ಯುದ್ಧದಲ್ಲಿ ಹೋರಾಡಿ ಬ್ರಿಟಿಷ್ ಸರ್ಕಾರ ತಮಗೆ ಇಷ್ಟವಿದೆಯೆಂದು ವ್ಯಕ್ತಪಡಿಸಿದ್ದಾರೆ. ಮುಹಮ್ಮದೀಯರಲ್ಲೂ ಹಿಂದುಗಳಲ್ಲೂ ಅನೇಕ ಜಗಳಗಳಾಗುತ್ತಿವೆ. ಮುಸ್ಲಿಮರು ಮುಹಮ್ಮದಾಲಿ ಜಿನ್ನಾರವರನ್ನು ತಮ್ಮ

ನಾಯಕರನ್ನಾಗಿ ಮಾಡಿಕೊಂಡಿದ್ದಾರೆ. ಜಿನ್ನಾರವರು ಪಾಕೀಸ್ಥಾನ ಬೇಕೆಂದು ಹೋರಾಡುತ್ತಿದ್ದಾರೆ. ಆದ್ದರಿಂದ ಈಗಲೇ ಬ್ರಿಟಿಷ್ ಸರ್ಕಾರ ಇಂಡಿಯಾಕ್ಕೆ ಸ್ವಾತಂತ್ರ್ಯವನ್ನು ಕೊಟ್ಟರೆ ಒಂದು ದೊಡ್ಡ ಒಳಜಗಳವಾಗಿ ಅನೇಕ ನಷ್ಟಗಳು ಸಂಭವಿಸುತ್ತವೆ. ಇಂಡಿಯಾದ ಜನರು ಹರಿಜನರನ್ನು ಕಂಡರೆ ಬಹಳ ಕ್ರೂರವಾಗಿ ವರ್ತಿಸುತ್ತಾರೆ. ಇಂಡಿಯಾದ ಆಡಳಿತ ಕ್ರಮವನ್ನು ನಿರ್ಮಿಸಿ ನಾವು ಹೊರಟುಹೋಗುತ್ತೇವೆ, ಇಲ್ಲದಿದ್ದರೆ ಬೇರೆ ಯಾವುದಾದರೂ ದೇಶದ ಆಡಳಿತದ ಕೈಕೆಳಗೆ ಇಂಡಿಯಾ ಸಿಕ್ಕಿ ಬಹಳ ಕಷ್ಟಪಡಬೇಕಾಗುತ್ತದೆ ".

ಮಿತ್ರರಾಷ್ಟ್ರಗಳು ಪ್ರಪಂಚದ ಶಾಂತಿಗಾಗಿ ಸ್ಯಾನ್‌ಫ್ರಾನ್ಸಿಸ್ಕೋದಲ್ಲಿ ಸಭೆಸೇರಲು ತೀರ್ಮಾನಿಸಿದ್ದುವು. ವೈಸ್‌ರಾಯ್‌ರವರು ಇಂಡಿಯಾದ ಪ್ರತಿನಿಧಿಗಳಾಗಿ, ಸರ್ ಫಿರೋಜ್ ಖಾನ್‌ನೂನ್, ಸರ್ ರಾಮಸ್ವಾಮಿ ಮೊದಲಿಯಾರ್ ಮತ್ತು ಸರ್ ಕೃಷ್ಣಮಾಚಾರಿಯವರನ್ನು ನೇಮಿಸಿದ್ದರು. ಇವರೆಲ್ಲರೂ ಬ್ರಿಟಿಷ್ ಸರ್ಕಾರದ ಕೈಗೊಂಬೆಗಳಂತಿದ್ದರು. ಇಂಡಿಯಾದ ಜನತೆಗೆ ಇವರುಗಳನ್ನು ನೇಮಿಸಿದ್ದು ಅಷ್ಟು ಸಮಾಧಾನಕರವಾಗಿರಲಿಲ್ಲ. ಅವರ ಒಂದೇ ಒಂದು ನಿರೀಕ್ಷೆಯೆಂದರೆ ವಿಜಯಲಕ್ಷ್ಮಿಯು ಆಗ ಅಮೇರಿಕದಲ್ಲಿದ್ದುದೇ. ವಿಜಯಲಕ್ಷ್ಮಿಯು ಇಂಡಿಯಾವನ್ನು ಮಿತ್ರರಾಷ್ಟ್ರಗಳ ಭದ್ರತಾಸಮಿತಿಯಲ್ಲಿ ಪ್ರತಿನಿಧಿಸಲು ತೀರ್ಮಾನಿಸಿದ್ದಳು.

ಸ್ಯಾನ್‌ಫ್ರಾನ್ಸಿಸ್ಕೋದಲ್ಲಿ ಬಂದಿಳಿದ ತಕ್ಷಣ ಅವಳಾಡಿದ ಮೊದಲನೇ ಮಾತೆಂದರೆ, " ಈಗ ಇಂಡಿಯಾದ ಪ್ರತಿನಿಧಿಗಳೆಂದು ಕರೆಯಲ್ಪಡುತ್ತಿರುವವರಿಗೆ ಒಂದು ತೃಣವಾದರೂ ತಮ್ಮ ದೇಶವನ್ನು ಪ್ರತಿನಿಧಿಸಲು ಶಕ್ತಿಯಿಲ್ಲ. ಅವರು ಇಂಡಿಯಾದ ಯಾವ ಗುಂಪಿನ ಕಡೆಗೂ ಸೇರದೆ ಕೇವಲ ಬ್ರಿಟಿಷ್ ಸರ್ಕಾರವು ತನ್ನ ಮನಸ್ಸಿಗೆ ಬಂದಂತೆ ಆರಿಸಿದಂತೆ ಬಂದವರು " ಎಂದು ಧೈರ್ಯವಾಗಿ ಗುಡುಗಿಬಿಟ್ಟಳು.

೧೯೪೫ರಲ್ಲಿ ಸ್ಯಾನ್‌ಫ್ರಾನ್ಸಿಸ್ಕೋದಲ್ಲಿ ಮಿತ್ರರಾಷ್ಟ್ರಗಳ ಸಮ್ಮೇಳನ ನಡೆಯಿತು. ಆ ಸಮ್ಮೇಳನದಲ್ಲಿ, ಅಮೇರಿಕದಲ್ಲಿ ಭಾರತ ಸ್ವಾತಂತ್ರ್ಯಕ್ಕಾಗಿ ಹೋರಾಟ ನಡೆಸಿದ 'ಇಂಡಿಯಾ ಲೀಗ್ ಆಫ್ ಅಮೇರಿಕ' ಮತ್ತು ಇಂಡಿಯಾದ ಸ್ವಾತಂತ್ರ್ಯಕ್ಕೋಸ್ಕರ ನೇಮಿತವಾದ ರಾಷ್ಟ್ರೀಯ ಸಂಘದ

ಪರವಾಗಿ ವಿಜಯಲಕ್ಷ್ಮಿಯು ತನ್ನ ಅತ್ಯುತ್ತಮವಾದ ನಿವೇದನಪತ್ರವನ್ನು ಅಂತರ್ರಾಷ್ಟ್ರೀಯ ಸಮ್ಮೇಳನದ ಮುಂದಿಟ್ಟಳು.

"ನಾನು ಭಾರತದ ರಾಷ್ಟ್ರೀಯ ಕಾಂಗ್ರೆಸ್ ಸಂಸ್ಥೆಯ ಪರವಾಗಿ ಮತ್ತು ಅಮೇರಿಕದಲ್ಲಿರುವ ಇಂಡಿಯಾ ಲೀಗ್ ಆಫ್ ಅಮೇರಿಕ ಎಂಬ ಸಂಸ್ಥೆಯ ಪರವಾಗಿ, ಭಾರತೀಯ ಜನತೆಯ ಪರವಾಗಿ ಈ ವಿಶ್ವಸಂಸ್ಥೆಯ ಎದುರು ಮಾತನಾಡಲು ಬಂದಿದ್ದೇನೆ.

"ಈ ಸಮ್ಮೇಳನದಲ್ಲಿ ಭಾರತದ ಪ್ರತಿನಿಧಿಗಳೇನೋ ಒಂದು ಭಾಗ ವಹಿಸಿದ್ದಾರೆ. ಆದರೆ ಅವರು ನಿಜವಾದ ಜನತೆಯ ಪ್ರತಿನಿಧಿಗಳಲ್ಲ. ಭಾರತವಿನ್ನೂ ಸ್ವತಂತ್ರವಾಗಿಲ್ಲ. ಭಾರತೀಯರನ್ನು ಗುಲಾಮಗಿರಿಯಲ್ಲಿಟ್ಟು ಅವರ ಮೇಲೆ ದಬ್ಬಾಳಿಕೆ ನಡೆಸುತ್ತಿರುವ ಬ್ರಿಟಿಷ್ ಸರ್ಕಾರದ ಕೈಗೊಂಬೆಗಳು ಮಾತ್ರ ಅವರು. ಭಾರತಕ್ಕೊಂದು ರಾಷ್ಟ್ರೀಯ ಸರ್ಕಾರವಿಲ್ಲ. ಸ್ವತಂತ್ರ ಬಾವುಟವಿಲ್ಲ. ೪೦ ಕೋಟಿ ಭಾರತೀಯರಿಗೆ ಹಿರಿದಾದ ಪುರಾತನ ಸಂಸ್ಕೃತಿಯಿದ್ದರೂ, ಅವರಿನ್ನೂ ಗುಲಾಮರು. ಇಂತಹ ಪರಿಸ್ಥಿತಿಯಲ್ಲಿ ವಿಶ್ವಸಂಸ್ಥೆ ಎಂಬ ಪ್ರಾತಿನಿಧಿಕ ಸಂಸ್ಥೆಯಲ್ಲಿ ಭಾರತದ ಪರವಾಗಿ ಪ್ರತಿನಿಧಿಸಲು ಬ್ರಿಟಿಷರ ಕೈಗೊಂಬೆಗಳಾಗಿ ಬಂದಿರುವ ಈ ಭಾರತೀಯರು ಅದಕ್ಕೆ ಅಯೋಗ್ಯರು.

"ಭಾರತದೇಶವನ್ನು ಗುಲಾಮಗಿರಿಯಲ್ಲಿಟ್ಟಿರುವುದು ವಿಶ್ವಸಂಸ್ಥೆಯ ನೈತಿಕ, ರಾಜಕೀಯ ತತ್ವಗಳಿಗೆ ವಿರುದ್ಧವಾಗಿದೆ. ಮಾನವಜನಾಂಗದ ಐದನೆ ಒಂದು ಭಾಗ ಜೀವಿಸುತ್ತಿರುವ ಭಾರತದಲ್ಲಿ ಆಗಿರುವ ಅನ್ಯಾಯವು ಇಡೀ ಮಾನವಕೋಟಿಗೇ ಅನ್ಯಾಯಮಾಡಿದಂತಾಗಿದೆ.

"ನಾನೀಗ ಭಾರತದ ಜನತೆಯ ಪರವಾಗಿ ಮಾತನಾಡುತ್ತಿದ್ದೇನೆ. ಹಿಂದುಳಿದ, ಉಳಿದ ಜನಾಂಗಗಳ ಪರವಾಗಿಯೂ ಮಾತನಾಡುತ್ತಿದ್ದೇನೆ. ೬೦೦ ಮಿಲಿಯನ್ ಜನರ ಪ್ರತಿನಿಧಿಯಾಗಿ ಮಾತನಾಡುತ್ತಿದ್ದೇನೆ. ವಿಶ್ವದ ಹೆಸರಿನಲ್ಲಿ, ಮಾನವ ಜನಾಂಗದ ಹೆಸರಿನಲ್ಲಿ, ವಿಶ್ವಸಂಸ್ಥೆಯ ತತ್ವಗಳ ಎದುರಿನಲ್ಲಿ ಇಂದೇ ಈ ಸ್ಯಾನ್‌ಫ್ರಾನ್ಸಿಸ್ಕೋ ಸಮ್ಮೇಳನವು ಭಾರತಕ್ಕೆ ಸ್ವಾತಂತ್ರ್ಯ ಕೊಡಬೇಕೆಂದು ಸಾರಲಿ. ಅಂದಿಗೆ ವಿಶ್ವಸಂಸ್ಥೆಯ ಗೌರವವು

ಹೆಚ್ಚುವುದು; ಸತ್ಯಕ್ಕೆ ಜಯವಾಗುವುದು; ಪ್ರಜಾಪ್ರಭುತ್ವಪದ್ಧತಿಯು ಚಿರಸ್ಥಾಯಿಯಾಗಿ ನಿಲ್ಲುವುದು ".

ಹೀಗೆಂದು ಆ ಹೇಳಿಕೆಯಲ್ಲಿ ಗರ್ಜಿಸಿದಳು ಸಿಂಹಿಣಿ ವಿಜಯಲಕ್ಷ್ಮಿ. ಸಮ್ಮೇಳನದ ಪ್ರತಿನಿಧಿಗಳೆಲ್ಲಾ ವಿಜಯಲಕ್ಷ್ಮಿಯ ಭಾಷಣವನ್ನು ಕೇಳಿ ದಿಕ್ಕುತೋಚದೆ ಮೂಗಿನ ಮೇಲೆ ಬೆರಳಿಟ್ಟುಕೊಂಡು ಭಾರತದ ನಿಜಸ್ಥಿತಿಯ ಬಗ್ಗೆ ಬೆಳಕನ್ನು ಬೀರಿದ ವೀರಮಾತೆ, ವಿಜಯಲಕ್ಷ್ಮಿಯ ಬಗ್ಗೆ ಮೆಚ್ಚುಗೆಯನ್ನು ತೋರಿಸಿದರು. ಅವಳ ಹೇಳಿಕೆಯ ಸತ್ಯಾಂಶಗಳು, ಪ್ರಾಮಾಣಿಕತೆ ಮತ್ತು ಸರಳತೆಗಳು, ಅಲ್ಲಿಯ ವಿಶ್ವದ ಪ್ರತಿನಿಧಿಗಳ ಮೇಲೆ ಅತೀವ ಪ್ರಭಾವವನ್ನುಂಟುಮಾಡಿತು.

ಸ್ಯಾನ್‌ಫ್ರಾನ್ಸಿಸ್ಕೋದಲ್ಲಿ ಸೇರಿದ ವಿಶ್ವಸಂಸ್ಥೆಯ ಪ್ರತಿನಿಧಿಗಳು, ವಿಜಯಲಕ್ಷ್ಮಿಯ 'ಮನವಿಯ ಬಗ್ಗೆ ಸಹಾನುಭೂತಿಯುಳ್ಳವರಾಗಿದ್ದರೂ ಕಾರ್ಯಕ್ರಮದ ಪಟ್ಟಿಯಲ್ಲಿ ಭಾರತಕ್ಕೆ ಸ್ವಾತಂತ್ರ್ಯ ನೀಡುವ ವಿಷಯವನ್ನು ಸೇರಿಸಲಿಲ್ಲವಾದುದರಿಂದ ಆ ವಿಷಯದ ಬಗ್ಗೆ ಚರ್ಚೆಯನ್ನೇ ಮಾಡಲಿಲ್ಲ. ಆದರೆ ವಿಜಯಲಕ್ಷ್ಮಿ ಎದೆಗುಂದಲಿಲ್ಲ. ನೇರವಾಗಿ ಅಮೇರಿಕದ ಜನತೆಯನ್ನುದ್ದೇಶಿಸಿ ಭಾರತದ ಪ್ರಶ್ನೆಯನ್ನವರ ಮುಂದಿಡಬೇಕೆಂದು ತೀರ್ಮಾನಿಸಿ ಅಮೇರಿಕದ ಮೂಲೆಮೂಲೆಗಳನ್ನೆಲ್ಲಾ ಸುತ್ತಿದಳು. ಪತ್ರಿಕಾಪ್ರತಿನಿಧಿಗಳನ್ನು ಬರಮಾಡಿಕೊಂಡು ಅವರಿಗೆ ಭಾರತದ ನಿಜಸ್ಥಿತಿಯ ಅರಿವನ್ನುಂಟುಮಾಡಿಕೊಟ್ಟಳು. ಅನೇಕಕಡೆ ಸ್ಫೂರ್ತಿಯುತವಾದ ಭಾಷಣಗಳನ್ನು ಮಾಡಿ ಭಾರತಕ್ಕೆ ಸ್ವಾತಂತ್ರ್ಯ ನೀಡಬೇಕು ಎಂಬುದನ್ನು ಅಮೇರಿಕದ ಸಾಮಾನ್ಯ ಜನತೆಗೆ ತಿಳಿಸಿಕೊಟ್ಟಳು. ಕಾರಾಗೃಹದಲ್ಲಿ ಕೊಳೆಯುತ್ತಿದ್ದ ನಾಯಕರ ಮಹತ್ವಜೀವನವನ್ನು ತಿಳಿಸಿ ಅವರನ್ನು ಬಿಡುಗಡೆಮಾಡಬೇಕೆಂದು ಘರ್ಜಿಸಿದಳು. ಭಾರತಕ್ಕೆ ಸ್ವಾತಂತ್ರ್ಯವು ಬಂದ ಮೇಲೆ ಅದು ಸ್ವತಂತ್ರವಾಗಿ, ಸ್ವಾತಂತ್ರ್ಯಪ್ರಿಯವಾದ ಇತರ ದೇಶಗಳಿಗೆ ಹೃತ್ಪೂರ್ವಕವಾಗಿ ಸಹಕಾರ ನೀಡಿ ಶಾಂತಿಯುತವಾದ ಪ್ರಪಂಚವನ್ನು ನಿರ್ಮಾಣಮಾಡಲು ಸಹಾಯಮಾಡುತ್ತದೆ, ಎಂದು ಸಾರಿದಳು.

ಪ್ರತಿದಿನ ೨೪ ಗಂಟೆಗಳನ್ನು ತನ್ನ ಈ ಕಾರ್ಯಕ್ಕಾಗಿ ವಿನಿಯೋಗ ಮಾಡುತ್ತಿದ್ದಳು.

" ಬೆಳಿಗ್ಗೆ ಎಂಟು ಗಂಟೆಯ ಹೊತ್ತಿಗೇ ಟೆಲಿಫೋನ್ ಬರುತ್ತಿತ್ತು. ತನ್ನ ಬೆಳಗಿನ ಕಾಫಿಯನ್ನು ಒಂದೇ ಗುಟುಕಿಗೆ ಕುಡಿದು ಬೇಗ ಬೇಗ ಸ್ನಾನ ಮಾಡಿ, ಆತುರದಿಂದ ಬೆಳಗಿನ ವರ್ತಮಾನ ಪತ್ರಿಕೆಗಳನ್ನು ಓದಿ ತನಗಾಗಿ ಬರುವ ಜನರ ಭೇಟಿಗಾಗಿ ಅಥವಾ ತಾನು ನೋಡಬೇಕೆಂದಿರುವವರ ಸಲು ವಾಗಿ ಸಿದ್ಧವಾಗುತ್ತಿದ್ದಳು. ಸಾವಿರಾರು ಜನ ಅಮೇರಿಕನ್ನರು ಭಾರತ ದೇಶೀಯರ ವಿಷಯ ತಿಳಿಯಬೇಕೆಂದು ಅವಳ ಭೇಟಿಗಾಗಿ ಕಾಯುತ್ತಿದ್ದರು. ವಿಜಯಲಕ್ಷ್ಮಿಯೂ ಆದಷ್ಟು ಹೆಚ್ಚು ಜನರನ್ನು ಭೇಟಿಮಾಡಿ ತನ್ನ ದೇಶದ ವಿಷಯವನ್ನು ಅರುಹುತ್ತಿದ್ದಳು. ಅಮೇರಿಕದ ಆಗಿನ ಅಧ್ಯಕ್ಷರಾಗಿದ್ದ ಟ್ರೂಮನ್ನರನ್ನೂ ಈಜಿಪ್ಟ್, ಈರಾಕ್ ಮತ್ತು ಸೌದಿಅರೇಬಿಯಾ ದೇಶದ ಮಂತ್ರಿಗಳನ್ನೂ ತಾನು ಅಮೇರಿಕದಲ್ಲಿದ್ದ ಕಾಲದಲ್ಲಿ ಭೇಟಿಮಾಡಿದಳು. ಹೀಗೆ ಆದಷ್ಟು ಹೆಚ್ಚು ಜನಕ್ಕೆ ಭಾರತದ ನಿಜಸ್ಥಿತಿಯ ತಿಳಿವನ್ನುಂಟು ಮಾಡಿಕೊಟ್ಟಳು ".

ವಿಜಯಲಕ್ಷ್ಮಿಯು ಕ್ಯಾಲಿಫೋರ್ನಿಯಾದ ಲೆಜಿಸ್ಲೇಟಿವ್ ಅಸೆಂಬ್ಲಿ ಯನ್ನುದ್ದೇಶಿಸಿ (ದೇಶದ ಆಯವ್ಯಯದ ಪಟ್ಟಿಯ ಚರ್ಚೆಯನ್ನು ಮುಂದು ವರಿಸಿ ಅವಳನ್ನು ಆಹ್ವಾನಿಸಿದ್ದರು.) ಭಾಷಣವನ್ನು ಮಾಡುತ್ತಾ ಯಾವ ದೇಶವೂ ಕೇವಲ ತನ್ನ ಸ್ವಾರ್ಥ ಸ್ವಾತಂತ್ರ್ಯಕ್ಕೋಸ್ಕರ ಹೊಡೆದಾಡಬಾರ ದೆಂದೂ, ಪೂರ್ಣಪ್ರಪಂಚದ ಶಾಂತಿಯನ್ನು ಧ್ಯೇಯವನ್ನಾಗಿಟ್ಟುಕೊಳ್ಳ ಬೇಕೆಂದೂ ಅಮೇರಿಕ, ಇಂಡಿಯಾ ಹೀಗೆ ಯಾವ ದೇಶವೇ ಆದರೂ ಒಂದೇ ಎಂದು ತಿಳಿಯಬೇಕೆಂದೂ ತಿಳಿಸಿದಳು.

ಹೀಗೊಂದು ಹೊಸ ಪ್ರಪಂಚವನ್ನು ಸ್ಥಾಪಿಸಬೇಕಾದರೆ ಸಾಂಸ್ಕೃತಿಕ ಮತ್ತು ಕೈಗಾರಿಕಾ ಸಂಬಂಧವು ನಿಕಟವಾಗಿ ಎಲ್ಲಾ ದೇಶಗಳೊಳಗೂ ಇರಬೇಕು. " ಭವಿಷ್ಯ ಪ್ರಪಂಚವು, ಯಾವ ಜನತೆಯು ಸತ್ಯ ಮತ್ತು ಶಾಂತಿ ಸಂದೇಶಗಳನ್ನು ತಮ್ಮ ಧ್ಯೇಯವನ್ನಾಗಿಟ್ಟುಕೊಂಡಿರುವುದೋ ಅದೇ ಜನತೆಯಿಂದ ತುಂಬಿರುವುದೆಂದು ನಂಬಿದ್ದೇನೆ " ಎಂದು ಮುಕ್ತಾಯ ಮಾಡಿದಳು.

ವಿಜಯಲಕ್ಷ್ಮಿಯು ಬಾಲ್ಟಿಮೋರನ್ನು ವೀಕ್ಷಿಸಿ ಅಲ್ಲಿದ್ದ ದೊಡ್ಡ ಸಭಾಂಗಣದಲ್ಲಿ ಭಾಷಣಮಾಡಿದುದರ ಫಲವಾಗಿ ನೀಗ್ರೋಗಳಿಗೂ ಮತ್ತು

ಬಿಳಿಯ ಜನರಿಗೂ ಹತ್ತಿರದ ಸಂಬಂಧವು ಬೆಳೆಯುವಂತೆ ಆಯಿತು. ಸಭಿಕರಲ್ಲಿ ನೀಗ್ರೋ, ಇಂಡಿಯಾ, ಚೈನಾ ಮತ್ತು ಜಪಾನ್ ದೇಶದ ಜನರೂ ಇದ್ದರು. ವಿಜಯಲಕ್ಷ್ಮಿಯು ಕಾಲಕ್ಕೆ ತಕ್ಕಂತೆ ತನ್ನ ಚಾಣಕ್ಯ ಬುದ್ಧಿಯನ್ನುಪಯೋಗಿಸಿ ಭಾರತವು ಎಲ್ಲಾ ಹಿಂದುಳಿದ ಜನರ ಸಾತಂತ್ರ್ಯ ಕ್ಕೋಸ್ಕರ ಹೋರಾಡುವುದೆಂದೂ, ನೀಗ್ರೋ ಜನರ ಸ್ಥಿತಿಯನ್ನು ನೋಡಿ ಮರುಗುವುದೆಂದೂ ತಿಳಿಸಿದಳು. ಹೀಗೆ ದೇಶದೇಶಗಳಲ್ಲೆಲ್ಲಾ ಜನಗಳ ಮನಸ್ಸಿನ ಮೇಲೆ, ಹೃದಯದ ಮೇಲೆ ಪರಿಣಾಮವುಂಟಾಗುವಂತೆ ತನ್ನ ತಾಯಿನಾಡಿನ ತಿಳಿವುಂಟುಮಾಡಿಕೊಟ್ಟಳು.

## ಮರಳಿ ಮಣ್ಣಿಗೆ

ಅಮೇರಿಕದಲ್ಲಿದ್ದ ಇಂಡಿಯಾದ ಶತ್ರುಗಳನ್ನು ಕೆಳಕ್ಕುರುಳಿಸಿ ವಿಜಯಲಕ್ಷ್ಮಿಯು ವಿಜಯಪತಾಕೆಯೊಡನೆ ಭಾರತಕ್ಕೆ ೧೯೪೭ ಜನವರಿಯ ಕೊನೆಯಭಾಗದಲ್ಲಿ ಹಿಂತಿರುಗಿದಳು. ಕರಾಚಿಯಲ್ಲಿ ಅವಳು ವಿಮಾನದಲ್ಲಿ ಬಂದಿಳಿದಾಗ ಅಪೂರ್ವ ಸ್ವಾಗತ ಅವಳಿಗೆ ಕಾದಿತ್ತು. ಕುತ್ತಿಗೆ ತುಂಬಿ ಹೋಗುವಷ್ಟು ಹೂವಿನ ಹಾರಗಳು ಅವಳನ್ನಲಂಕರಿಸಿದವು. ವಿಜಯ ಲಕ್ಷ್ಮಿಯು ತನ್ನ ಈ ಅಮೇರಿಕದ ಪ್ರಯಾಣದಿಂದ, ಅಮೇರಿಕಾ, ಭಾರತಕ್ಕೆ ಸ್ವಾತಂತ್ರ್ಯ ಕೊಡಲು ಏನೂ ಸಹಾಯಮಾಡಲಾರದು, ಭಾರತವು ಸ್ವಸಾಮರ್ಥ್ಯದಿಂದಲೇ ಗಳಿಸಿಕೊಳ್ಳಬೇಕು, ಎಂಬ ಅಮೂಲ್ಯವಾದ ಜ್ಞಾನ ವನ್ನು ಪಡೆದುಕೊಂಡಳು.

ನೆಹರೂ ಮತ್ತು ಲಾರ್ಡ್‌ಮೌಂಟ್ ಬೇಟನ್ ಸಂಧಾನದ ಫಲವಾಗಿ ಭಾರತಕ್ಕೆ ಸಂಪೂರ್ಣ ಸ್ವಾತಂತ್ರ್ಯ ೧೯೪೭ನೇ ಇಸವಿ ಆಗಸ್ಟ್ ೧೫ನೇ ತಾರೀಖು ಬಂದಿತು. ಬ್ರಿಟಿಷ್ ಸರ್ಕಾರವು ಭಾರತವನ್ನು ಇಬ್ಭಾಗಮಾಡಿ ಭಾರತ, ಪಾಕೀಸ್ಥಾನಗಳೆರಡೂ ದೇಶಕ್ಕೂ ಸ್ವಾತಂತ್ರ್ಯವನ್ನು ಕೊಡ ಬೇಕಾಯಿತು. ಭಾರತವನ್ನು ಎರಡು ಹೋಳುಮಾಡಿದ್ದಕ್ಕೆ ಭಾರತೀಯರೆಲ್ಲ ಕಣ್ಣೀರಿಟ್ಟರು. ಗಾಂಧೀಜಿಗಂತೂ ಅದು ಸಮ್ಮತವೇ ಇರಲಿಲ್ಲ. ಅವರು

ಅದನ್ನು ಕಟುವಾಗಿ ವಿರೋಧಿಸಿಯೂ ಇದ್ದರು. ಆದರೂ ಪರಿಸ್ಥಿತಿ ಹತೋಟಿ ಮೀರಿಹೋಗಿತ್ತು. ಭಾರತವೇನೋ ಸ್ವತಂತ್ರವಾಗಿ ಪಂಡಿತ ಜವಹರಲಾಲ್‌ನೆಹರೂರವರು ಭಾರತದ ಪ್ರಥಮ ಮುಖ್ಯ ಮಂತ್ರಿಗಳಾಗಿ ಆಡಳಿತಸೂತ್ರಗಳನ್ನು ವಹಿಸಿಕೊಂಡರು.

## ರಾಯಭಾರಿ ವಿಜಯಲಕ್ಷ್ಮಿ

ನೆಹರೂರವರ ಪ್ರಥಮಕಾರ್ಯ, ಭಾರತದ ಬಗ್ಗೆ ಸತ್ಯಸಂಗತಿಗಳನ್ನು ಪರದೇಶದಲ್ಲಿ ತಿಳಿಸಬೇಕಾಗಿತ್ತು. ಅದಕ್ಕೆ ಯೋಗ್ಯರಾದ ಜನರನ್ನು ಆರಿಸಿ ದೇಶವಿದೇಶಗಳಿಗೆ ರಾಯಭಾರಿಯಾಗಿ, ಸಾಂಸ್ಕೃತಿಕ ರಾಯಭಾರಿಯಾಗಿ ಜಯಭೇರಿಯನ್ನು ಹೊಡೆದು ಬಂದ ಶ್ರೀಮತಿ ವಿಜಯಲಕ್ಷ್ಮಿ ಪಂಡಿತರನ್ನು ಭಾರತವನ್ನು ಪ್ರತಿನಿಧಿಸಲು ರಷ್ಯಾದೇಶಕ್ಕೆ ರಾಯಭಾರಿಯನ್ನಾಗಿ ನೆಹರು ನೇಮಿಸಿದರು. ರಷ್ಯಾದೇಶಕ್ಕೂ, ಭಾರತಕ್ಕೂ ಸ್ನೇಹಸಂಬಂಧವನ್ನು ಬೆಳೆಸಬೇಕಾಗಿತ್ತು. ಆ ಕೆಲಸದಲ್ಲಿ ನುರಿತ ವಿಜಯಲಕ್ಷ್ಮಿ ತಾನಿದ್ದ ಎರಡು ವರ್ಷಗಳ ಅವಧಿಯಲ್ಲಿ ಚೆನ್ನಾಗಿ ಕೆಲಸಮಾಡಿದಳು. ಭಾರತ-ರಷ್ಯಾ, ದೇಶಗಳು ಈಗ ಅತಿಹತ್ತಿರದಲ್ಲಿ ಬಂದಿದ್ದರೆ, ಅದಕ್ಕೆ ವಿಜಯಲಕ್ಷ್ಮಿಯು ಹಾಕಿದ ಭದ್ರವಾದ ಅಡಿಗಲ್ಲೇ ಮುಖ್ಯಕಾರಣವೆಂದು ಹೇಳಬೇಕು.

ರಷ್ಯಾದೇಶದಲ್ಲಿ ಸ್ನೇಹಕುದುರಿಸಿ ಸ್ನೇಹಪತಾಕೆಯನ್ನು ಹಾರಿಸಿದ ವಿಜಯಲಕ್ಷ್ಮಿಯನ್ನು ಎರಡು ವರ್ಷಗಳ ನಂತರ ಅಮೇರಿಕದ ರಾಯಭಾರಿಯನ್ನಾಗಿ ನೇಮಿಸಿತು ಭಾರತ ಸರ್ಕಾರ. ಆ ದೇಶದಲ್ಲಂತೂ, ವಿಜಯಲಕ್ಷ್ಮಿಯು ಭಾರತದ ಬಗ್ಗೆ ಮೊದಲೇ ತನ್ನ ಪ್ರಭಾವ ಬೀರಿದ್ದಳು. ಈಗಂತೂ ಕೇಳಬೇಕೆ! ಎಲ್ಲಿ ನೋಡಿದರಲ್ಲಿ ಗೌರವ, ಅಮೇರಿಕದ ಮೂಲೆಮೂಲೆಗಳಲ್ಲಿ ಗಾಂಧೀಜಿಯ ಸತ್ಯ, ಅಹಿಂಸೆಯ ಸಂದೇಶವನ್ನು ಬೀರಿದರು. ಅಮೇರಿಕದ ಜನತೆಗೆ ಭಾರತದ ನಿಜವಾದ ಅರಿವನ್ನುಂಟುಮಾಡಿಕೊಟ್ಟ ಧೀರೆ, ವಿಜಯಲಕ್ಷ್ಮಿ

# ವಿಶ್ವಸಂಸ್ಥೆಯ ಅಧ್ಯಕ್ಷಳು

ಅವಳ ಬುದ್ಧಿಶಕ್ತಿಯನ್ನೂ ಆಡಳಿತವಿಚಕ್ಷಣತೆಯನ್ನೂ ಭಾರತದ ಪ್ರತಿನಿಧಿಯಾಗಿ ವಿಶ್ವಸಂಸ್ಥೆಯಲ್ಲಿ ಆಕೆ ಮಾಡುತ್ತಿದ್ದ ಭಾಷಣಗಳನ್ನೂ ಕೇಳಿ ವಿದೇಶಿಯ ರಾಜಕಾರಣಪಟುಗಳು ಆಕೆಯ ವಿಚಾರದಲ್ಲಿ ತುಂಬಾ ಗೌರವವನ್ನೂ, ಅಭಿಮಾನವನ್ನೂ ಇಟ್ಟುಕೊಂಡಿದ್ದರು. ಆದರ ಫಲವಾಗಿ ಆಕೆಯನ್ನು ವಿಶ್ವಸಂಸ್ಥೆಯ ಅಧ್ಯಕ್ಷರನ್ನಾಗಿ ೧೯೫೩ರಲ್ಲಿ ಸರ್ವಾನುಮತದಿಂದ ಚುನಾಯಿಸಲಾಯಿತು. ಏಕಮೇವ ಮಹಿಳಾ ಅಧ್ಯಕಿಣಿಯಾಗಿ ಭಾರತಕ್ಕೆ ಗೌರವ ತಂದಳು ವಿಜಯಲಕ್ಷ್ಮಿ. ವಿಶ್ವಸಂಸ್ಥೆಯ ಅಧ್ಯಕ್ಷಿಣಿಯಾಗಿ ಜಗತ್ತಿನಲ್ಲೆಲ್ಲಾ ಶಾಂತಿಸಂದೇಶವನ್ನು ಬೀರಿ ಭಾರತಕ್ಕೆ ಕೀರ್ತಿ ಗೌರವಗಳನ್ನು ತಂದಳು.

೧೯೫೩ನೇ ಇಸ್ವಿಯಲ್ಲಿ ಭಾರತದಲ್ಲುಂಟಾದ ಸಾರ್ವತ್ರಿಕ ಚುನಾವಣೆಯಲ್ಲಿ ಉತ್ತರಪ್ರದೇಶದಿಂದ ಪಾರ್ಲಿಮೆಂಟಿಗೆ ಚುನಾಯಿತಳಾದಳು. ಅವಳು ಮನಸ್ಸು ಮಾಡಿದ್ದರೆ ಆಕೆ ಭಾರತದ ಕೇಂದ್ರ ಸರ್ಕಾರದ ಮಂತ್ರಿಯಾಗಬಹುದಾಗಿತ್ತು. ಆಕೆಗೆ ಆ ಸಾಮರ್ಥ್ಯವೂ ಇತ್ತು. ಈ ವೇಳೆಗೆ ಚೈನಾ ಭಾರತ ಬಾಂಧವ್ಯವು ಬೆಳೆಯುತ್ತಿತ್ತು. ನೆಹರೂ ಚೈನಾಕ್ಕೆ ಸಾಂಸ್ಕೃತಿಕ ನಿಯೋಗವೊಂದನ್ನು ಕಳುಹಿಸಿದರು. ಅದಕ್ಕೆ ನಾಯಕರಾರು ಗೊತ್ತೆ? ಶ್ರೀಮತಿ ವಿಜಯಲಕ್ಷ್ಮಿ ಪಂಡಿತರೇ. ಅವರಿಗಿಂತ ಪ್ರಭಾವಯುತವಾಗಿ ಇನ್ನಾರು ಆ ಸ್ಥಾನವನ್ನು ತುಂಬ ಬಲ್ಲರು! ಚೈನಾದೇಶದಿಂದ ಬಂದವರೇ, ತನ್ನ ಪ್ರಾಂತ್ಯದಿಂದ ಉತ್ತರಪ್ರದೇಶದಲ್ಲಿ ತಿರುಗಾಡಿ ಜನತೆಯ ಸೇವೆಯಲ್ಲಿ ಉದ್ಯುಕ್ತಳಾಗಲು ಮನಸ್ಸುಮಾಡಿ ತಾನು ಬಂದ ಮತದಾರ ಕ್ಷೇತ್ರದಲ್ಲಿ ಸುತ್ತಾಡಿಕೊಂಡು ಬಂದರು. ಪಾರ್ಲಿಮೆಂಟ್ ಅಧಿವೇಶನಕ್ಕೆ ಹಾಜರಾಗಲು ದೆಹಲಿಗೆ ಬಂದ ಮಾರನೇದಿನವೇ ವಿಜಯಲಕ್ಷ್ಮಿಗೆ ಇನ್ನೊಂದು ಆಹ್ವಾನ ಕಾದುಕುಳಿತಿತ್ತು. ಇಂಗ್ಲೆಂಡಿನ ರಾಯಭಾರಿಯಾಗಿ ಆಗ ತಾನೇ ಶ್ರೀ ಬಿ. ಜಿ. ಖೇರ್, ನಿವೃತ್ತರಾಗಿದ್ದರು. ಆ ಸ್ಥಾನ ತುಂಬುವುದಕ್ಕೆ ಆಗ ವಿಜಯಲಕ್ಷ್ಮಿಗಿಂತ ಅರ್ಹರಾದವರು ಯಾರೂ ಇರಲಿಲ್ಲ. ರಷ್ಯಾ, ಅಮೇರಿಕಗಳಲ್ಲಿ ಜಯಭೇರಿ ಹೊಡೆದು ಬಂದ ವಿಜಯಲಕ್ಷ್ಮಿ ಇಂಗ್ಲೆಂಡಿ

ನಲ್ಲೂ ಉತ್ತಮವಾಗಿ ಕೆಲಸಮಾಡುವಳೆಂದೇ ತಿಳಿದು ಭಾರತ ಸರ್ಕಾರವು ಆಕೆಯನ್ನು ಇಂಗ್ಲೆಂಡಿನಲ್ಲಿ ಭಾರತದ (ಹೈಕಮಿಷನರ್) ರಾಯಭಾರಿ ಹುದ್ದೆಗೆ ನೇಮಿಸಿತು. ಅಂದಿನಿಂದ ಇಂದಿನವರೆಗೂ ಆಕೆ ಇನ್ನೂ ಕೆಲಸ ದಲ್ಲಿಯೇ ಇದ್ದಾರೆ. ಯಶಸ್ವಿಯಾಗಿ ಕೆಲಸಮಾಡಿ ಇಂಗ್ಲೆಂಡ್-ಭಾರತದ ಬಾಂಧವ್ಯವನ್ನು ಚೆನ್ನಾಗಿ ಬೆಳಸಿದ್ದಾರೆ.

## ಭಾರತದ ವೀರ ನಾರೀಮಣಿ

ಶ್ರೀಮತಿ ವಿಜಯಲಕ್ಷ್ಮಿಗೆ ಭಾರತದ ನಾರೀಮಣಿಯರಲ್ಲಿ ಅಗ್ರಪೂಜೆ ಸಲ್ಲಬೇಕು. ಭಾರತಕ್ಕೆ ಮತ್ತು ಪ್ರಪಂಚಕ್ಕೆ ಆಕೆ ಸಲ್ಲಿಸಿದ ಸೇವೆ ಶ್ರೇಷ್ಠ ವಾದುದಾಗಿದೆ. ಮಹಿಳೆಯರು ರಾಜಕೀಯದಲ್ಲಿ ಸೇರಿದರೆ, ಯಾವರೀತಿ ಯಲ್ಲಿ ದೇಶಸೇವೆ ಮಾಡಬಹುದೆಂಬುದನ್ನು ವಿಜಯಲಕ್ಷ್ಮಿ ತೋರಿಸಿ ಕೊಟ್ಟಿದ್ದಾರೆ. ಭಾರತದ ಮಹಿಳೆಯರು, ವಿಜಯಲಕ್ಷ್ಮಿ ಹಾಕಿಕೊಟ್ಟ ದಾರಿಯಲ್ಲಿ ನಡೆದರೆ, ಭಾರತದ ಮಹಿಳೆಯರ ಪ್ರಗತಿಯೂ ಅಲ್ಲದೆ, ಭಾರತದ ಉದ್ಧಾರವೂ ಅಗುವುದು. **'ತೊಟ್ಟಿಲನ್ನು ತೂಗುವ ಕೈ ರಾಜ್ಯವನ್ನೂ ಆಳಬಲ್ಲದು'** ಎಂಬ ಆರ್ಯೋಕ್ತಿಯನ್ನು ಸತ್ಯಮಾಡಿ ಕೊಟ್ಟಿದ್ದಾರೆ, ವಿಜಯಲಕ್ಷ್ಮಿ. ಇಂತಹವಳನ್ನು ಪಡೆದ ಭಾರತಾಂಬೆ ಧನ್ಯಳು.



# ನಮ್ಮ ಇತರ ಪ್ರಕಟಣೆಗಳು

**ಸರೋಜಿನಿ ನಾಯ್ಡು**—ಲೇಖಕರು : ನಾಕೃಮೂ.
ಭಾರತದ ಕೋಗಿಲೆ, ಏಕಮೇವ ಮಹಿಳಾ ವೀರಾಗ್ರಣಿ, ಸ್ವಾತಂತ್ರ್ಯ ಯೋಧೆ, ಸರೋಜಿನಿ ನಾಯ್ಡು ಜೀವನ ಚರಿತ್ರೆ. ಬೆಲೆ ೦-೮-೦

**ಬಾ**—ಲೇಖಕರು : ನಾಕೃಮೂ.
ಗಾಂಧೀಜಿಯವರ ಧರ್ಮ ಪತ್ನಿ, ಕಸ್ತೂರಿ ಬಾರವರ ಜೀವನ ಪರಿಚಯ. ಬೆಲೆ ೦-೪-೦

**ವಿಜಯಲಕ್ಷ್ಮಿ ಪಂಡಿತ್**—ಲೇಖಕಿ : ಶಕುಂತಲಾ ನಾಡಿಗ್.
ಜವಹರಲಾಲರ ಸಹೋದರಿ ಶ್ರೀಮತಿ ವಿಜಯಲಕ್ಷ್ಮಿ ಪಂಡಿತರ ಜೀವನಚರಿತ್ರೆ. ಎಲ್ಲರಿಗೂ ತಿಳಿಯುವಂತೆ ತಿಳಿಯಾದ ಭಾಷೆಯಲ್ಲಿ ಬರೆದಿದ್ದಾರೆ. ಜೀವನಚರಿತ್ರೆ ತುಂಬಾ ಸ್ವಾರಸ್ಯವಾಗಿದೆ.
ಬೆಲೆ ೦-೬-೦

**ಸವಿನೆನಪು**—ಲೇಖಕಿ : ಎಲಿನಾರ್ ರೂಸ್‌ವೆಲ್ಟ್, ಅನು : ಮನ್ವಂತ.
ಶ್ರೀಮತಿ ಎಲಿನಾರ್ ರೂಸ್‌ವೆಲ್ಟರು ಅಮೇರಿಕದ ಶ್ವೇತಭವನದಲ್ಲಿ ಇದ್ದಾಗಿನ ಅವರ ದಿನಚರಿ. ಬೆಲೆ ೧-೪-೦

**ಅಮೇರಿಕದ ಪವಾಡಪುರುಷರು**—ಅನು : ನಾಕೃಮೂ.
ಅಮೇರಿಕದ ೨೩ ಮಹಾಪುರುಷರ ಜೀವನದಲ್ಲಾದ ಸವಿನೆನಪು ಕೊಡುವ ಪುಸ್ತಕ. ಬೆಲೆ ೨-೦-೦

**ಗೀತಾ ಸಾಹಿತ್ಯ ಮಂದಿರ**
**೨೬೨೪, ವಿ. ವಿ. ಮೊಹಲ್ಲ**
**ಮೈಸೂರು.**